# ಮೊದಲ ಮಾತು

ದಕ್ಷಿಣ ಕನ್ನಡ ಜಿಲ್ಲೆಯ ಹಿರಿಯ ಸಮಾಜವೊಂದರಲ್ಲಿ ಹಿಂದಿನಿಂದಲೂ ನಡೆದುಕೊಂಡು ಬರುತ್ತಿರುವ ಸರ್ವಸಾಮಾನ್ಯ ದೋಷಗಳ ಚಿತ್ರವಿದು. ಇದರಲ್ಲಿ ಹಿಂದಿನ ಮತ್ತು ಇಂದಿನ ಮನೋವೃತ್ತಿಗಳ ತಿಕ್ಕಾಟವು ಒಡೆದು ಕಾಣುವಂತಿದೆ. ಈ ಚಿತ್ರದಲ್ಲಿ ಕಾಣುವ ದೋಷಗಳು ಅದೊಂದೇ ಸಮಾಜದ–ಅಲ್ಲ ಸಕಲ ಸಮಾಜಗಳಲ್ಲಿಯೂ ಸದಾ ಕಾಣುವಂತಹುಗಳೇ.

ಇದು ಕವೀಂದ್ರ ರವೀಂದ್ರರ **ಶಾಂತಿನಿಕೇತನದ** ವಿದ್ಯಾರ್ಥಿಗಳಾಗಿದ್ದ ಈಗ **ನವಯುಗದ** ಸಂಪಾದಕರಾಗಿರುವ ನಮ್ಮ 'ಪ್ರಪಂಚದ' ಶ್ರೀ. **ಕೆ.** ಕಾಂತಪ್ಪ ಶೆಟ್ಟರಿಂದ ಬರೆಯಲ್ಪಟ್ಟಿತು. ಶ್ರೀ. ಶೆಟ್ಟರು ಹತ್ತು ಹಲವು ಬಗೆಗಳಿಂದ ಸಮಾಜ ಸುಧಾರಣೆಗೆ ಪ್ರಯತ್ನಿಸುವವರಲ್ಲ ಒಬ್ಬರು ಇವರಿಂದ ಬರೆಯಲ್ಪಟ್ಟ ಸಾಮಾಜಿಕ ನಾಟಕಗಳಲ್ಲಿ ಹಲವು ಈಗಾಗಲೇ ರಂಗಭೂಮಿಗೆ ಬಂದು ಜನಾದರವನ್ನು ಪಡೆದಿವೆ. ಇದು ಕೂಡ ಹಲವು ಸಲಪ್ರದರ್ಶಿಸಲ್ಪಟ್ಟು ಜನತೆಯ ಮನ್ನಣೆಗೆ ಪಾತ್ರವಾಗಿದೆ.

ಇದರ ಪ್ರಥಮ ಮುದ್ರಣವು ಸರಕಾರದ ಹಾಗೂ ಜನತೆಯ ಪ್ರೋತ್ಸಾಹದಿಂದ ಈಗಾಗಲೇ ಮುಗಿದು ಎರಡನೇ ಸಲ ಪ್ರಕಾಶಕ್ಕೆ ಬರುವಂತಾದುದು 'ಪ್ರಪಂಚ'ಕ್ಕೆ ಆನಂದದ ವಿಷಯವಾಗಿದೆ. ಈ ಸಲ ಭಾಷೆಯಲ್ಲಿಯೂ, ಮುದ್ರಣದಲ್ಲಿಯೂ ಸಾಧ್ಯವಾದ ಮಟ್ಟಿಗೆ ಸುಧಾರಣೆಯನ್ನು ಮಾಡಲಾಗಿದೆ. ಹಿಂದಿನಂತೆಯೇ ಈಗಲೂ ಇದಕ್ಕೆ ತಕ್ಕ ಪ್ರೋತ್ಸಾಹ ದೊರೆದೀತೆಂಬ ಭರವಸೆಯಿರುವುದು.

**'ಕಿರಿಯರ ಪ್ರಪಂಚ'.**
ಉಡುಪಿ
೧೫ – ೮ – '೩೪

**ಕೆ. ಹೊನ್ನಯ್ಯ ಶೆಟ್ಟಿ,**
ಕಾರ್ಯದರ್ಶಿ.

## ಪಾತ್ರಪರಿಚಯ

| | | |
|---|---|---|
| ೧ | ತಾರಾನಾಥ | ಕಥಾನಾಯಕ |
| ೨ | ಇಂದಿರೆ | ಕಥಾನಾಯಕಿ |
| ೩ | ಮನೋಹರ | ತಾರಾನಾಥನ ಪ್ರಾಣಸ್ನೇಹಿತ |
| ೪ | ದಿನಕರ | ತಾರಾನಾಥನ ಮಿತ್ರರು |
| ೫ | ಸುಂದರ | |
| ೬ | ರಂಗ | ಮನೋಹರನ ಸೇವಕ |
| ೭ | ತುಂಗಮ್ಮ | ತಾರಾನಾಥನ ತಾಯಿ |
| ೮ | ಮನೋರಮೆ | ತಾರಾನಾಥನ ತಂಗಿ |
| ೯ | ಸಂಜೀವ | ಮನೋರಮೆಯ ಗಂಡ |
| ೧೦ | ನಾರಾಯಣ ತಂತ್ರಿ | ಹಳ್ಳಿಯ ಜ್ಯೋತಿಷ್ಯ |
| ೧೧ | ಚಂದು ಶೆಟ್ಟಿ | ಸಂಜೀವನ ಜ್ಞಾತಿ |
| ೧೨ | ಸೋಮ | ತಾರಾನಾಥನ ಸೇವಕ |

೧೩ ಸಂಜೀವನ ಕೌಟುಂಬಿಕರು

# ಸಂಶಯ ಪಿಶಾಚಿ

## ೧ನೇ ದೃಶ್ಯ

[ಮಂಗಳೂರಿನ ವೆಳಸೀರ್ ರಸ್ತೆಯ ಪಾರ್ಶ್ವದ ತನ್ನ ಮನೆಯ ಒಂದು ಕೋಣೆಯಲ್ಲಿ, ಬಿ. ಎ ವಿದ್ಯಾರ್ಥಿ ಮನೋಹರನು ತನ್ನ ಅತಿ ಪ್ರಿಯ ಹಾಗೂ ವಿನೋದಪರ ಸೇವಕನಾದ ರಂಗನೊಡನೆ ಸಲ್ಲಾಪಿಸುತ್ತಿರುವನು ]

**ಮನೋಹರ**—ರಂಗ, ನೀನು ನನ್ನ ಕೆಲಸದಲ್ಲಿರಬೇಕಾದರೆ ನಾನು ಹೇಳಿದ ಹಾಗೆ ಕೇಳಬೇಕು. ನಿನ್ನಿಚ್ಛಾನುಸಾರ ನಡೆಯುವುದಾದರೆ ಇಲ್ಲಿಂದ ಈ ಕ್ಷಣ ತೊಲಗಬೇಕು (ಸಿಟ್ಟಿನ ನಟನೆಯಿಂದ ರಂಗನನ್ನು ಕಡೆಗಣ್ಣಿನಿಂದ ನೋಡಿ ನಗುವನು )

**ರಂಗ**—ಆಯಿತು ಸ್ವಾಮಿ. ಆಯಿತು ನಿಮ್ಮ ಕೆಲಸಬಿಟ್ಟು ನಾನು ಈ ಕಾಲದಲ್ಲಿ ಎಲ್ಲಿಗೆ ಹೋಗಲಿ? ನಿಮ್ಮನ್ನೇ ನಂಬಿ ನಾನೊಂದು ಚಂದದ ಹುಡುಗಿಯನ್ನು ಮದುವೆ ಸಹ ಮಾಡಿಕೊಂಡದ್ದು ನೀವೇ ನನ್ನನ್ನು ಈಗ ನಿವಾರಿಸಿದರೆ ನನ್ನ ಗತಿಯೇನು? ನನ್ನ ಹುಡುಗಿಯ ಪಾಡೇನು?

**ಮನೋಹರ**—ಹ! ಹ! ಹ! ಏನು ಚಂದ! ನಿನ್ನ ಹುಡುಗಿ ಕರಿಕಾಗೆ! ನನ್ನನ್ನು ನಂಬಿ ಮದುವೆಯಾದುದಾದರೆ ನನ್ನನ್ನೇ ನಂಬಿ ನೀನೊಂದು ಕೆಲಸಮಾಡು ನಿನ್ನ ಚಂದದ ಹೆಂಡತಿಯೂ ನೀನೂ ಕೈಕೈ ಹಿಡಿದು ಎತ್ತರದ ದೊಂದು ಗುಡ್ಡದ ತುದಿಯನ್ನೇರಿ, ಒಬ್ಬರನ್ನೊಬ್ಬರು ಬಿಗಿದಪ್ಪಿಕೊಂಡು, ಕಣ್ಣು ಮುಚ್ಚಿ, ಗುಂಡುಕಲ್ಲಿನಂತೆ ಕೆಳಗುರುಳಿಬಿಡಿ ಆಗ ನನ್ನನ್ನು ನಂಬಿದುದಕ್ಕೆ ಸರಿ ಇಂಬು ದೊರೆಯುವುದು! ಒಬ್ಬರನ್ನೊಬ್ಬರು ನಂಬಿ ಮದುವೆಯಾಗುವುದುಂಟೇ ಹುಚ್ಚ?

**ರಂಗ**—ಕಪ್ಪಿನಲ್ಲಿಯೂ ಒಂದು ಚಂದವಿಲ್ಲವೆ ಸ್ವಾಮಿ? ನಮಗೆ ಬಡವರಿಗೆ ಅದೇ ಚಂದ. ನೀವು ಮೊದಲೇ ಹೀಗೆ ಹೇಳುತ್ತಿದ್ದರೆ ನಾನು ಮದುವೆ ಮಾಡಿಕೊಳ್ಳುತ್ತಿದ್ದೇ ಇಲ್ಲವಲ್ಲ! ಹುಡುಗಿಯರನ್ನು ಮದುವೆಯಾಗುವುದೆಲ್ಲಾ ಗುಡ್ಡದಿಂದ ಕೆಳಗುರುಳಬೇಕೆಂದೇ? ಹುಡುಗಿಯರ ಪ್ರೇಮದ ಬಲುಮೆ

ಯನ್ನು ನೀವಿನ್ನೂ ಅರಿಯಲಾರಿರಿ ಸ್ವಾಮಿ. ಇನ್ನು ಹೆಚ್ಚು ಸಮಯ ಹೋಗಲಾರದು. ನಿನ್ನೆ ಅಮ್ಮ ಹೇಳುತ್ತಿದ್ದರು......... ..........(ನಗುವನು.)

**ಮನೋಹರ**—(ರಂಗನ ಕಿವಿ ಹಿಡಿದು) ಅಮ್ಮ ಏನು ಹೇಳುತ್ತಿದ್ದರು? ಹೆಂಗುಸರ ಮಾತು ಕೇಳಿ ಸಿಕ್ಕಿದವರೊಡನೆ ಏನೇನೊ ಹೇಳಬೇಡ. ತಿಳಿಯಿತೇ?

**ರಂಗ**—(ವಿಕಾರವಾಗಿ ಕೂಗಿ) ಅಯ್ಯೋ! ಆಯಿತು ಸ್ವಾಮಿ, ಆಯಿತು! ನಾನು ಯಾರೊಡನೆಯೂ ಒಂದು ಶಬ್ದವೆತ್ತುವುದಿಲ್ಲ. ನಿಮಗೆ...... .....

**ಮನೋಹರ**—(ಮೂಗು ಹಿಡಿದೆಳೆದು) ಬಾ, ಇಲ್ಲಿ ಬಾ! ಇಲ್ಲಿ ಕುಳಿತು ಕೊಳ್ಳು. (ಕುರ್ಚಿಯ ಕಡೆಗೆ ಎಳೆದೊಯ್ಯುವನು.)

**ರಂಗ**—ಅಯ್ಯೊಯ್ಯೊ! ಸ್ವಾಮಿ, ನೀವೇಕೆ ಹೀಗೆ ಮಾಡುತ್ತೀರಿ? ನಾನು ನಿಮ್ಮೊಂದಿಗೆ ಕುರ್ಚಿಯಲ್ಲಿ ಕುಳಿತುಕೊಂಡುದನ್ನು ನೋಡಿದರೆ ಅಮ್ಮ ನನಗೆ ಅನ್ನ ಹಾಕಲಿಕ್ಕಿಲ್ಲ. ನಿಮ್ಮಿಬ್ಬರ ನಡುವೆ ಸಿಕ್ಕಿ ಬಡಪಾಪಿ ನಾನೊಬ್ಬ 'ಫಡ್ಚಾ'ದನಲ್ಲ! ದಮ್ಮಯ್ಯ! ಅಷ್ಟುಮಾಡಿ! ನಾಸಿಲ್ಲಿಯೇ ಕುಳಿತುಕೊಳ್ಳುತ್ತೇನೆ. ನಾನೂ ನಿಮ್ಮ ಸರಿಸರಿ ಕುಳಿತರೆ ನಮ್ಮೊಳಗೆ ಹೆಚ್ಚುಕಡಿಮೆ ಏನು ಸ್ವಾಮಿ?

**ಮನೋಹರ**—ಹೆಚ್ಚುಕಡಿಮೆಗೆ ಬೆಂಕಿಬೀಳಲಿ. ನೀನು ನನ್ನ ಕೋಣೆ ಯೊಳಗೆ ಕೆಲಸ ಮಾಡುವಾಗ ನಾನು ಹೇಳಿದಂತೆ ಕೇಳಬೇಕು. ನೀನು ಕುರ್ಚಿಯಲ್ಲಿ ಕುಳಿತುಕೊಳ್ಳುವುದಿಲ್ಲವಾದರೆ ನಾನೇ ನಿನ್ನೊಂದಿಗೆ ನೆಲದಲ್ಲಿ ಕುಳಿತುಕೊಳ್ಳುವೆನು. (ಮನೋಹರನು ರಂಗನನ್ನು ಕೈಹಿಡಿದು ಕುಳ್ಳಿರಿಸಿ ತಾನೂ ಅವನೊಡನೆ ಕುಳಿತುಕೊಳ್ಳುವನು) ಒಂದು ಹಾಡು ಹೇಳು ನೋಡುವ.

**ರಂಗ**—ಇಲ್ಲ ಸ್ವಾಮಿ, ನನಗೇನೂ ಗೊತ್ತಿಲ್ಲ. ಬಾಲಕನಾಗಿರುವಾಗ ಎಲ್ಲಿಯೋ ಮೈದಾನಿನಲ್ಲಿ ನಾಟಕವಾಗುವಾಗ ಹೊರಗೆ ಕುಳಿತುಕೊಂಡು, ನಿಮ್ಮಂಥವರಾರಾದರೂ 'ಫೊನೊಗ್ರಾಫ್' ಇಡುವಾಗ ಎಲ್ಲಿಯೋ ಸ್ವಲ್ಪ ಕದ್ದು ಕೇಳಿದುದು. ಈಗೆಲ್ಲಾ ಎಲ್ಲಿಯೋ ಗುಡ್ಡ ಹತ್ತಿದೆ! ಸ್ವರ 'ಬೆರೆಬೆರೆ' ಆಗಿದೆ.

**ಮನೋಹರ**—ಇದ್ದ ಸ್ವರ ಸಾಕು. ಒಣರಗಳೆಯನ್ನೆಲ್ಲಾ ಬಿಟ್ಟು ಗೊತ್ತಿದ್ದೊಂದು ಹಾಡು ಹೇಳು. ನನ್ನ ಕೋಣೆಯಲ್ಲಿರುವಾಗ ನಾನು ಹೇಳಿದ ಹಾಗೆ ಕೇಳಬೇಕೆಂಬುದು ಮರೆತು ಹೋಯಿತೆ?

**ರಂಗ**—ಆಯಿತು ಸ್ವಾಮಿ, ಆಯಿತು. ಹೇಗಾದರೂ ಬಡವರು ಬದುಕ

ಬೇಕಲ್ಲ! (ತಲೆತುರಿಸಿ, ಸ್ವರ ಸರಿಮಾಡಿ, ಆಲೋಚಿಸಿ) ಸ್ವಾಮಿ, ನೀವು ಬಲು ಸೊಗಸಾಗಿ ಹಾಡುತ್ತೀರಿ. ಮೊದಲು ನೀವೊಂದು ಹಾಡಿ. ಅನಂತರ ನಾನು ಹಾಡುವೆನು.

**ಮನೋಹರ**—ಆಯಿತು. ನನಗೇನೂ ಅದರಲ್ಲಿ ನಾಚಿಕೆಯಿಲ್ಲ ನೋಡು. (ಒಂದು ಹಾಡನ್ನು ಹಾಡುವನು.)

**ರಂಗ**—ಹ ಹ ಹ! ಬಲು ಬೇಶ್! (ತಲೆದೂಗುತ್ತಾ) ನಾನೀಗ ಹಾಡ ಬೇಕೆ? (ಪುನಃ ಸ್ವರ ಸರಿಮಾಡಿಕೊಂಡು ಹಾಡುವನು.)

[ಮನೋಹರನ ಮಿತ್ರರಾದ ತಾರಾನಾಥ ದಿನಕರ ಸುಂದರರು ಸಂಜೆ ತಿರುಗಾಡಹೋಗಲು ಅವನನ್ನು ಕರದೊಯ್ಯ ಬರುವರು. ಅವನು ರಂಗನೊಡನೆ ಕುಳಿತಿರುವುದನ್ನು ಕಂಡು ವಿನೋದಾಶ್ಚರ್ಯ ಪಡುವರು.]

**ಸುಂದರ**—ಇದೇನು ಮನೋಹರ?

**ಮನೋಹರ**—ಏನು ಸುಂದರ? ವಿಶೇಷವೇನೂ ಇಲ್ಲ. 'ಲಿಬರ್ಟಿ, ಇಕ್ವಾಲಿಟಿ ಎಂಡ್ ಫ್ರೆಟರ್ನಿಟಿ.'

**ದಿನಕರ**—ಅಂದರೆ?

**ತಾರಾನಾಥ**—ಅಂದರೆ ನಿನಗೆ ತಿಳಿಯದೆ? ಸಮಾನತ್ವ, ಸೋದರತ್ವ ಮತ್ತು ಸ್ವಾತಂತ್ರ್ಯ. ಇನ್ನುಮೇಲೆ ಮೇಲುಕೀಳೆಂಬ ತಾರತಮ್ಯವನ್ನೆಲ್ಲಾ ಮೂಲೆಗೊತ್ತಿ ಮಾನವಕೋಟಿಯೆಲ್ಲಾ ಸರಿಸಮಾನವೆಂದು ಪರಿಗಣಿಸಬೇಕು.

**ಮನೋಹರ**—ಪರಿಗಣಿಸುವುದು ಮಾತ್ರವೆ? ಅದರಂತೆಯೇ ಆಚರಿಸ ಬೇಕು. ನಾನು ಇಂದು 'ಫ್ರೆಂಚ್ ರಿವಲೂಶನ್' ಓದಿದೆ. ಅದರ ಮೂಲ ತತ್ವವನ್ನು ಮನಗಂಡು ಕೂಡಲೇ ಕಾರ್ಯಕ್ಕೆ ಹಚ್ಚಿಬಿಟ್ಟೆ.

**ದಿನಕರ**—ನೀನು ಹೀಗೆ ಓದಿದುದನ್ನೆಲ್ಲಾ ಕಾರ್ಯಕ್ಕೆ ಹಚ್ಚಹೋದರೆ ನಿನ್ನನ್ನು ಬೇಗನೆ ಹುಚ್ಚರ ಆಸ್ಪತ್ರೆಗೋ, ಜೈಲಿಗೋ ಕಳುಹಿಸಬೇಕಾದೀತು!

**ಮನೋಹರ**—ಏಕೆ? ನಾನು ನಿಮ್ಮಂತೆ ದೊಡ್ಡ ದೊಡ್ಡ ಪುಸ್ತಕ ಗಳನ್ನು 'ಪೇಜು ಪೇಜು' ಮಗುಚಿಹಾಕಿ, ಆಚರಣೆಯ ಗೊಡವೆಯೇ ಇಲ್ಲದೆ, ತಲೆತುಂಬ ಭಾವನೆಗಳನ್ನು ತುಂಬಿಸಿಡುವವನಲ್ಲ. ಓದುವುದೇ ಕಡಿಮೆ; ಓದಿದುದನ್ನೆಲ್ಲಾ ಕಾರ್ಯಕ್ಕೆ ಹಚ್ಚಿಬಿಡುವೆನು.

**ಸುಂದರ**—ಅದಂತಿರಲಿ. ಈ ನಿನ್ನ ಸೇವಕನ ಜಾತಿ ಯಾವುದು?

**ಮನೋಹರ**—ಮಾನವ ಜಾತಿ.

**ತಾರಾನಾಥ**—ಅದೇ ಸರಿಯಾದ ಉತ್ತರ!

**ದಿನಕರ**—ಅವನು ಬಿಲ್ಲವ, ಸುಂದರ.

**ತಾರಾನಾಥ**—ಬಿಲ್ಲವನಾದರೇನು? ಪಂಚಮನಾದರೇನು? ಅವನೂ ನಮ್ಮಂತೆಯೇ ಮಾನವನಲ್ಲವೇ? ಇಷ್ಟೊಂದು ವಿದ್ಯೆ ಕಲಿತ ಮೇಲೂ ಜಾತಿ ಭೇದದ ಭೂತವು ಇನ್ನೂ ನಿಮ್ಮನ್ನು ಕಾಡುತ್ತಿರುವುದು ಅತ್ಯಂತ ಸಂತಾಪಕರ.

**ದಿನಕರ**—ಈ ಬಿಲ್ಲವ ಹುಡುಗನಲ್ಲಿ ಅಂತಹ ವಿಶೇಷ ಗುಣವೇನಿದೆ?

**ಮನೋಹರ**—ಏನಾದರೂ ವಿಶೇಷ ಗುಣವಿದ್ದರೆ ನೀವು ಅವನನ್ನು ನಿಮ್ಮ ಸಮಾನನಾಗಿ ಸ್ವೀಕರಿಸುವಿರಾ?

**ಸುಂದರ**—ಬಿಲ್ಲವನು ಎಷ್ಟಾದರೂ ಬಿಲ್ಲವನೆ! ಅವನು ಬಂಟನಾಗಲಿ ಬ್ರಾಹ್ಮಣನಾಗಲಿ ಆಗುವುದು ಹೇಗೆ? ಬೇವಿನ ಮರ ಮಾವಿನಮರವಾಗುವುದುಂಟೆ?

**ತಾರಾನಾಥ**—ಬೇವಿನ ಹುಟ್ಟು ಬೇರೆ, ಮಾವಿನ ಹುಟ್ಟು ಬೇರೆ. ಜನ್ಮತಃ ಅವುಗಳಲ್ಲಿ ಭೇದವಿರುವುದರಿಂದ ಬೇವು ಮಾವಾಗಲಾರದು. ಆದರೆ ಮಾನವಕೋಟಿಯಲ್ಲಿ ಜನ್ಮತಃ ಯಾವ ಭೇದವೂ ಇರಲಾರದು. ಅಂದ ಮೇಲೆ ನಮ್ಮಲ್ಲಿ ಒಬ್ಬರೊಬ್ಬರೊಳಗಿರುವ ಭೇದವು ಕೇವಲ ಕೃತಕ, ಸ್ವಾರ್ಥನಿರ್ಮಿತ, ಅಸ್ವಾಭಾವಿಕ.

**ದಿನಕರ**—ಜಾತಿಭೇದವಲ್ಲವಾದರೂ ತರಗತಿ, ಸ್ಥಾನ, ಮಾನ ಮೊದಲಾದ ಬೇರೆ ವಿಧದ ಭೇದವು ಲೋಕದಲ್ಲಿ ಇದ್ದೇ ಇರುವುದು.

**ಮನೋಹರ**—ನಿಮ್ಮ ಈ ರಗಳೆಯನ್ನೆಲ್ಲಾ ಕಟ್ಟಿಡಿ. ರಂಗನು ಹಾಡುವಿಕೆಯಲ್ಲಿ ನಿಮಗಿಂತ ನಿಪುಣನಾದರೆ ಅವನ ಶ್ರೇಷ್ಠತೆಯನ್ನು ಒಪ್ಪುವಿರಾ?

**ಸುಂದರ**—ಆಗಬಹುದು. ನಿನ್ನ ಚಾಕರಿಯ ಬಿಲ್ಲವ ಹುಡುಗನೂ ಹಾಡಿ, ನಮ್ಮನ್ನು ಮೆಚ್ಚಿಸುವುದಾದರೆ, ಮತ್ತೇನು ಕಡಿಮೆ!

**ಮನೋಹರ**—ನೀವೆಲ್ಲಾ ಕಪಟಮಾಡಬಾರದು—ಯಥಾರ್ಥ ಹೇಳಬೇಕು. ರಂಗನು ನಿಮ್ಮ ಹಾಗೆ ನಾಟಕ, ಗಾಯನಕಚೇರಿಗಳನ್ನೆಲ್ಲಾ ಕಂಡವನಲ್ಲ. ಇಡೀ ದಿವಸ ಮನೆಯಲ್ಲಿ ಕತ್ತೆಚಾಕರಿ ಮಾಡುತ್ತಿದ್ದವ.

**ದಿನಕರ**—ಆಗಲಿ, ಹಾಡಲಿ ನೋಡುವ. ನಿನ್ನ ಶಿಫಾರಸೆಲ್ಲಾ ಬೇಡ. (ವ್ಯಂಗ್ಯವಾಗಿ ನಗುವನು.)

**ಮನೋಹರ**—ರಂಗ, ನೋಡುವ, ರಾಚಪ್ಪನ 'ಇದು ಮಂದಾನಿಲ' ಈ ಕಂದವನ್ನು ಹಾಡು.

**ರಂಗ**—ಇಲ್ಲ ಸ್ವಾಮಿ, ಅದು ನನಗೆ ಸರಿಯಾಗಿ ಬರುವುದಿಲ್ಲ, ಕ್ಷಮಿಸಿ.

(ದಿನಕರ ಸುಂದರರು ನಗುವರು.)

**ಮನೋಹರ**—(ಕುಪಿತನಾಗಿ) ಯಾವಾಗಲೂ ಉಂಟೇ ಉಂಟು ಈ ನಿನ್ನ ಒಣರಗಳೆ. ಹಾಡುತ್ತೀಯೋ ಇಲ್ಲವೋ? ನಾನು ಆಗ ಹೇಳಿದುದು ನೆನಪಿದೆಯೋ?

**ರಂಗ**—ಆಯಿತು ಸ್ವಾಮಿ. (ಹಾಡುವನು.)

(ಮೆಚ್ಚಿ ಎಲ್ಲರೂ ಕೈಚಪ್ಪಾಳೆ ಹೊಡೆಯುವರು.)

**ತಾರಾನಾಥ**—ಈಗ ನಿಮ್ಮ ಹೆಮ್ಮೆ ಇಳಿಯಿತೆ? 'ಫುಲ್ ಮೆನಿ ಎ ಜೆಮ್ ಆಫ್ ಪ್ಯೂರೆಸ್ಟ್ ರೇ ಸೆರೀನ್' ಎಂದೆಲ್ಲಾ ಗ್ರೇ ಕವಿಯು ಹಾಡಿರು ವುದು ಅಕ್ಷರಶಃ ನಿಜವು. ಎಷ್ಟೊಂದು ರತ್ನಗಳು ಸಮುದ್ರ ಗರ್ಭದ ಕೆಸ ರೊಳಗಿದ್ದು ಪ್ರಕಾಶ ಬೀರದೆ ಮಸುಕಾಗಿರುವುದಿಲ್ಲ! ಎಷ್ಟೊಂದು ಮನೋಹರ ಸುಮಗಳು ನಿರ್ಜನ ನಿಬಿಡಾರಣ್ಯ ಮಧ್ಯದಲ್ಲಿ ಅರಳಿ, ಪರಿಮಳಬೀರಿ, ಬಾಡಿ ಧರೆಗುರುಳುವುದಿಲ್ಲ! ಸಂದರ್ಭ ದೊರೆಯದೆ ಎಷ್ಟೊಂದು ಪ್ರತಿಭಾಶಾಲಿಗಳು ಮರೆಯೊಳಗಿದ್ದು ಮರಣ ಹೊಂದುವುದಿಲ್ಲ!

**ಮನೋಹರ**—ಮಿತ್ರ, ಇದರ ಸಾರವನ್ನೊಳಗೊಂಡ ಹಾಡೊಂದನ್ನು ರಂಗನ ನೆನಪಿಗಾಗಿ ರಚಿಸಿರುವೆನು.

**ತಾರಾನಾಥ**—ಅದನ್ನು ಹಾಡು ನೋಡುವ.

**ದಿನಕರ**—ಅಹ! ಸೇವಕನೂ ಯಜಮಾನನೂ ಇಬ್ಬರೂ ಹಾಡು ಗಾರರು! ನಿಮ್ಮನ್ನು ಜತೆಗೊಳಿಸಿದುದು ಯಾವ ದೈವವೋ?

**ಸುಂದರ**—ಈ ಭ್ರಾಂತಿಗೆ ಆ ಮಂಕು ಗಂಟು!

**ತಾರಾನಾಥ**—ಸಾಕು ಸಾಕು! ವಿಚಾರದ ಪ್ರತಿಮೂರ್ತಿಗಳೆಂದರೆ ನೀವಿಬ್ಬರೇ ಸರಿ! ಮನೋಹರ, ಅವರೇನು ಬೇಕಾದರೂ ಹೇಳಲಿ. ನೀನು ಹಾಡು ನೋಡುವ.

**ಮನೋಹರ**—ಬೆಳಗಿವೆ ಕಡಲಿನ ಕತ್ತಲ ಗವಿಯು
ರತುನಗಳೆನಿತೋ ನಿರ್ಮಲ ಛವಿಯು;
ಮರೆಯಲಿ ಬಿರಿಯುವುವೆನಿತೋ ಅಲರು
ಮರುವಾತದಿ ಕಳೆಯಲು ಮಾಧುರಿಯ.

**ದಿನಕರ**—ಬೇಶ್! ಬೇಶ್! ಒಳ್ಳೇ ಕವಿತಾಶಕ್ತಿಯೂ ಉಂಟು ನಮ್ಮ ವಿದೂಷಕನಿಗೆ! ಕವಿ ರವೀಂದ್ರರ ಹೆಸರನ್ನು ಉಳಿಸುವವನೆಂದರೆ ಮನೋಹರನೇ ಸರಿ.

**ಸುಂದರ**—ಉಳಿಸುವವನೋ ಅಳಿಸುವವನೋ! ಏನೇನೋ ಶಬ್ದಗಳನ್ನು ಜೋಡಿಸಿ ರಾಗ ಎಳೆದುಬಿಡುವುದು ಕವಿತೆಯಾದರೆ ಕಾಡು ಕಪಿಗಳೂ ಕವಿಗಳೇ!

**ತಾರಾನಾಥ**—ಸಾಕಪ್ಪ ನಿಮ್ಮ ಹರಟೆ. ಈಗ ನಾವು ಯಾವ ಕಡೆಗೆ ತಿರುಗಾಡಹೋಗುವುದು? (ಆಲೋಚಿಸಿ) ಕದಿರೆಗೆ ಹೋಗುವ. ಸಂಧ್ಯಾಕಾಲದ ಕದಿರೆಯ ನೋಟವು ಅತಿ ಮನೋಹರವಾಗಿರುವುದು.

**ದಿನಕರ**—ಅದೇನು ಮನೋಹರವೊ! ನೀನು ಕದಿರೆಗುಡ್ಡಕ್ಕಲ್ಲ, ಪದವಿಗೆ ಹೋಗು. ನೋಡಲು ಒಂದು ನಾಯಿಯಾದರೂ ಸಿಗದ ಸ್ಥಳಗಳಿಗೆಲ್ಲಾ ನಾನು ಬರಲಾರೆನು.

**ಮನೋಹರ**—ಹಾಗಾದರೆ ಬಂದರಿನ 'ಪೀಯರಿ'ಗೆ ಹೋಗುವ. ಸಂಜೆಯ ಸೊಂಪಿಗೂ, ಮಂದಮಾರುತನ ತಂಪಿಗೂ ಮೈಯೊಡ್ಡಿ ಆನಂದಿಸುವ.

**ದಿನಕರ**—ಎಂತಹ ತಂಪು! ಮಾಪಿಳ್ಳೆಯರ ಮೀನಿನ ಮುಚುವೆಗಳ ದುರ್ವಾಸನೆ! ನಾನು ಅಲ್ಲಿಗೂ ಬರಲಾರೆನು.

**ಸುಂದರ**—ಬೇಡ, 'ಲೈಟ್ ಹೌಸ್ ಹಿಲ್ಲ'ಗೆ ಹೋಗುವ. ತಂಗಾಳಿಯೂ ಬೀಸುತ್ತದೆ; ಸಂಧ್ಯಾರಾಗದ ಸುಂದರ ನೋಟವೂ ಇದೆ.

**ದಿನಕರ**—ಹೌದು ಹೌದು! ಮುದಿ 'ಪೆನ್ಶನರು'ಗಳೋ, ಬೇಸತ್ತ 'ಕ್ಲಾರ್ಕ'ರೋ, ಬಾಯ್ಬಿಟ್ಟು, ಎದೆಯುಬ್ಬಿಸಿ ಕೊರಡುಗಳಂತೆ ಒರಗಿಕೊಂಡಿರುವ ಚಂದವೇನು ನೋಡುವುದು!

**ಮನೋಹರ**—ತಿಳಿಯಿತು ತಿಳಿಯಿತು ದಿನಕರನ ಆಂತರ್ಯ. ಮನಸ್ಸಿನಲ್ಲಿದ್ದುದನ್ನೆಲ್ಲಾ ಬಿಚ್ಚಿ ಹೇಳಿಬಿಟ್ಟರೇನಪ್ಪ? ಇಷ್ಟೆಲ್ಲಾ ಸುತ್ತಾಟ ಬೇಕೇ?

ಈಗ 'ಕನ್ವೆಂಟ್' ಬಿಡುವ ಹೊತ್ತಾಯಿತು. ಬೆಂದೂರಿನ ಮಾರ್ಗವಾಗಿ ಹೋಗಬೇಕೆಂದೇ ದಿನಕರನ ಇಚ್ಛೆ, ಅಲ್ಲವೇ?

**ಸುಂದರ**—ಅದು ಸಹಜವಾದುದಲ್ಲವೆ? 'ಅನ್‌ಲೈಕ್ ಪೋಲ್ಸ್ ಎಟ್ರೇಕ್ಟ್' (ವಿರುದ್ಧ ಧ್ರುವಗಳಿಗೆ ಪರಸ್ಪರ ಆಕರ್ಷಣ) ಹೋಗೋಣ.

(ಎಲ್ಲರೂ ಹೋಗುವರು)

---

# ೨ನೇ ದೃಶ್ಯ

[ಮಂಗಳೂರಿನ ಕೊಡಿಯಾಲಬೈಲಿನ ಮನೆಯಲ್ಲಿ ತಾರಾನಾಥನು ಚಿಂತಾಮಗ್ನನಾಗಿ ಕುಳಿತಿರುವಾಗ ಮನೋಹರನು ಬೆತ್ತ ಬೀಸಿಕೊಂಡು ಸಿಳ್ಳು ಹಾಕುತ್ತಾ ಪ್ರವೇಶಿಸಿ, ತಾರಾನಾಥನನ್ನು ಕಂಡು, ವಿನೋದವಮಾಡುವನು]

**ಮನೋಹರ**—ಇದೇನು ತಾರಾನಾಥ? ಇಂದು ಇಷ್ಟೊಂದು ಬೇಸರವೇಕೆ? (ತಾರಾನಾಥನು ಸುಮ್ಮನಿರುವನು. ಮನೋಹರನು ಅವನ ಭುಜ ಹಿಡಿದು ಕುಲುಕಿ) ಇಂದು ನನ್ನ ಮಿತ್ರನಿಗೇನಾಯಿತಪ್ಪ! ತಾರಾನಾಥ, ಹೇಳು, ನಿನ್ನ ಚಿಂತೆಯ ಆಂತರ್ಯವನ್ನು ಮನಬಿಚ್ಚಿ ಹೇಳು. ನಿನ್ನ ಆಪ್ತನಾದ ಮನೋಹರನು ನಿನಗಾಗಿ ಏನು ಮಾಡಲೂ ಸಿದ್ಧನಿರುವನು. (ತಾರಾನಾಥನು ಮತ್ತೂ ತಲೆಬಾಗಿ ಸುಮ್ಮನಿರುವನು. ಆಗ ಮನೋಹರನು ಅವನ ಗಡ್ಡ ಹಿಡಿದೆತ್ತಿ ಅತ್ಯಂತ ದುಃಖ ನಟಿಸಿ ದಿಟ್ಟಿಸಿ ನೋಡುವನು. ಈ ನಟನೆಯನ್ನು ಸಹಿಸಲಾರದೆ ತಾರಾನಾಥನು ನಕ್ಕುಬಿಡುವನು)

**ತಾರಾನಾಥ**—ಮನೋಹರ, ಈ ರೀತಿಯ ನಿನ್ನ ಹುಡುಗಾಟಿಕೆಯೇ ನಿನಗೆ ಕೆಡುಕು.

**ಮನೋಹರ**—ಆಗಲಿ, ನನ್ನ ಹುಡುಗಾಟಿಕೆಯೇ ನನಗೆ ಕೆಡುಕಾಗಲಿ. ಹುಡುಗಾಟಿಕೆಯಿಂದಲೇ ಈ ಲೋಕದಿಂದ ನಾನು ಅಡಗುವಂತಾಗಲಿ. ಅದೇ ನನಗೆ ಆನಂದ. ನಿನ್ನಂತೆ ನಾನು ಎಂದೆಂದಿಗೂ 'ಸೀರಿಯಸ್' (ಗಂಭೀರ) ಆಗಿರಲಾರೆ. ಇಡೀ ವಿಶ್ವವೇ ಅದೊಬ್ಬನ ಲೀಲಾಜಾಲವಾಗಿರುವಾಗ ಮೂರು ದಿವಸಗಳ ನಮ್ಮಾ ಜೀವಿತವನ್ನು ನಾವೇಕೆ ಲೀಲಾಪ್ರಾಯವಾಗಿ ಕಳೆಯಬಾರದು?

**ತಾರಾನಾಥ**—ಮನೋಹರ, ಲೀಲೆಯಾವುದು? ಇಡೀ ವಿಶ್ವವೇ

ಗಂಭೀರ ಸಮಸ್ಯೆಯಾಗಿ ಭಯ ಬೀರುತ್ತಿರುವುದು ಲೀಲೆಯೇ? ನಮ್ಮ ಜೀವನವೇ ಅದೊಂದು ವಿಷಾದಾಂತ ನಾಟಕ. ನಾವೆಲ್ಲರೂ ನೀರ ಮೇಲಣ ಗುಳ್ಳೆಗಳಂತೆ ಒಂದೆರಡು ದಿವಸ ಈ ಲೋಕದಲ್ಲಿ ಉಳಿದು ಮತ್ತೆ ಲ್ಲಿಗೋ ಮಾಯವಾಗುವೆವು. ನಮ್ಮ ಜೀವನ ನಾಟಕದ ಸೂತ್ರಚಾಲಕನಾರು, ನಮ್ಮ ಪೂರ್ವಾಪರವೇನು ಎಂದು ವಿಚಾರ ಮಾಡಿದರೆ ಅನಂತ ಶೂನ್ಯವೇ ನಮ್ಮನ್ನು ಸುತ್ತುವುದು.

**ಮನೋಹರ**—ಹ! ಹ! ಹ! ಈ ಗಹನವಿಚಾರ ಇದಾರಿಗೆ ಬೇಕು? ಜೀವನವೊಂದು ನಾಟಕವೆಂಬುದನ್ನು ನೀನೇ ಒಪ್ಪುವೆಯಷ್ಟೆ. ಅದು ವಿಷಾದಾಂತವಿರಲಿ, ಹರುಷಾಂತವಿರಲಿ, ಅವರಲ್ಲಿ ನಾನೊಬ್ಬ ವಿದೂಷಕ ಪರವೆ ಎತ್ತಿದೊಡನೆಯೇ ಓಡಿ ಬಂದು, ನಕ್ಕು ನಲಿದು, ಹಾಡಿ ಪಾಡಿ, ವಿನೋದ ಮಾಡಿ, ಪರದೆ ಬಿದ್ದೊಡನೆಯೇ ಆನಂದದಿಂದ ಮರೆಯಾಗುವುದರ ಹೊರತು ಬೇರೆ ಯಾವ ಸಾರಾಸಾರ ವಿಚಾರವೂ ನನಗೆ ಬೇಡ. ವಿನೋದದಿಂದ ಬಂದು, ವಿನೋದದಿಂದಿದ್ದು, ವಿನೋದದಿಂದಲೇ ಸಾಗುವೆನು.

**ತಾರಾನಾಥ**— ಸಾಕು ಮನೋಹರ, ನಿನ್ನ ವಿನೋದಪರ ವರ್ತನೆಯೇ ತಾತ್ಸಾರಕ್ಕೆ ಕಾರಣವಾಗಿರುವುದು. ವಿನೋದದ ಹೊರತು ನಿನ್ನಿಂದೇನೂ ಸಾಗದೆಂದೇ ಹಲವರ ಅಭಿಪ್ರಾಯ. ನಿನ್ನ ಆಂತರ್ಯದ ತಿರುಳನ್ನು ಅವರೇನು ಬಲ್ಲರು?

**ಮನೋಹರ**—ನನ್ನಾಪ್ತನಾದ ನೀನು ತಿಳಿದುಕೊಂಡರೆ ಸರಿ. ಇತರರಿಂದ ನನಗೇನಾಗಬೇಕು?

**ತಾರಾನಾಥ**—ನಿನ್ನ ಮಿತ್ರನು ಈಗ ಅಸಹಾಯಕನಾಗಿರುವನು. ಮನೋರಮೆಯೂ ಈ ರೀತಿ 'ಗಿಲಿಟಿ'ಗೆ ಮರುಳಾಗಿ ಹೋಗುವಳೆಂದು ನಾನು ಕನಸಿನಲ್ಲಿಯೂ ನೆನಸಲಿಲ್ಲ ಮನೋಹರ!

**ಮನೋಹರ**—ಏನು? ಸಂಗತಿ ಏನು?

**ತಾರಾನಾಥ**—ಸಂಗತಿಯಿಷ್ಟೆ— ಮನೋಹರನಿಗೆ ಮನೋರಮೆಯು ದೊರಕುವ ಹಾಗಿಲ್ಲ

**ಮನೋಹರ**—ಹ! ಹ! ಮನೋಹರನಿಗೆ ಮನೋರಮೆಯೊಬ್ಬಳಲ್ಲ, ಸಾವಿರ ಮಂಧಿ ದೊರಕುವರು.

**ತಾರಾನಾಥ**—ಮನೋಹರ, ನಿನ್ನ ತಮಾಷೆಯನ್ನೆಲ್ಲಾ ನಿಲ್ಲಿಸಿ, 'ಸೀರಿಯಸ್ಸಾ'ಗಿದ್ದರೆ ಸಂಗತಿಯನ್ನೆಲ್ಲಾ ತಿಳಿಸುವೆನು.

**ಮನೋಹರ**—ಆಯಿತು, 'ಸೀರಿಯಸ್ಸು!' (ಬಾಯಿ ಮುಚ್ಚಿ ಕೈಕಟ್ಟಿ ನಿಲ್ಲುವನು )

**ತಾರಾನಾಥ**—ನಾನೀಗ ನಗೆಗೀಡಾದುದಲ್ಲದೆ ನಿನಗೂ ಅದರ ಪಾಲು ಕೊಟ್ಟಂತಾಯಿತು. ನಮ್ಮಿಬ್ಬರ ಗಾಢ ಮೈತ್ರಿಯನ್ನು ಸಂಬಂಧದ ಬಂಧದಿಂದ ದೃಢಪಡಿಸಬೇಕೆಂಬ ನನ್ನ ಪ್ರಯತ್ನವು ನಿಷ್ಫಲವಾಯಿತು. ನಿನ್ನೆ ಮಾವನೂ ತಾಯಿಯೂ ಮನೋರಮೆಯೂ ಆ ಸಂಜೀವನ ಆಡಂಬರ,ದರ್ಪ, ದೌಲತ್ತಿಗೆ ಮರುಳಾಗಿ ಅವನಿಗೇನೇ ನೆಂಟಸ್ತಿಕೆಯನ್ನು ನಿಶ್ಚಯ ಮಾಡಿಬಿಟ್ಟರು. ನಾನು ಎಷ್ಟು ಹೇಳಿದರೂ ಕೇಳಲಿಲ್ಲ. ಅವನು ಘನಕುಟುಂಬದವನಂತೆ! ಹೇರಳ ಆಸ್ತಿ ಬದುಕು ಉಳ್ಳವನಂತೆ! ವಿಶೇಷ 'ಕಾರ್‌ಭಾರಿ'ಯಂತೆ!

**ಮನೋಹರ**—ನಾನು?

**ತಾರಾನಾಥ**—ನೀನು ಬಡ ಸರಕಾರಿ ನೌಕರನೊಬ್ಬನ ಮಗನಂತೆ! ಮನೆತನವಾಗಲಿ, ಆಸ್ತಿ ಬದುಕಾಗಲಿ ಇಲ್ಲದವನಂತೆ! ತಂದೆಯೇನೋ ಗಳಿಸಿರುವ ಅಲ್ಪ ಸ್ವಲ್ಪ ಹಣವನ್ನು ಬೇಂಕಿನಲ್ಲಿಟ್ಟು ಅದರ ಬಡ್ಡಿಯಿಂದ ಜೀವನ ನಿರ್ವಹಿಸುವವನಂತೆ! ಮುಖ್ಯವಾಗಿ ಸದಾ ಹುಡುಗಾಟಿಕೆಮಾಡುತ್ತಾ ಯಾವ ಕೆಲಸಕ್ಕೂ ಬಾರದವನಂತೆ!

**ಮನೋಹರ**—ಅವರು ಹೇಳುವುದು ತಪ್ಪೇ? ಹಳ್ಳೀರಿನ ಒಂದು ಮನೆ, ಬೇಂಕಿನ ಸ್ವಲ್ಪ ಹಣ, ಹುಡುಗಾಟಿಕೆಯಲ್ಲದೆ ಮತ್ತೆ ನನಗೇನುಂಟು? ನೀನೇನೋ ಕುರುಡು ಮೈತ್ರಿಯಿಂದ ನನ್ನ ಕೊರತೆಗಳಿಗೆ ಕಣ್ಮುಚ್ಚಿದ್ದರೆ ಅವರೂ ಹಾಗೆ ಮಾಡುವರೇ?

**ತಾರಾನಾಥ**—ನಿನ್ನನ್ನು ಈರೀತಿ ವಂಚಿಸಿದುದಕ್ಕಾಗಿ ಕ್ಷಮಿಸು ಮಿತ್ರ! ನಮ್ಮಿಬ್ಬರ ಮೈತ್ರಿಯು ಎಂದಿನಂತೆಯೇ ಇರುವುದಲ್ಲವೇ?

**ಮನೋಹರ**—ಛೆ! ಛೆ! ಇದೇನು ಮಾತು? ನಮ್ಮಿಬ್ಬರ ಮೈತ್ರಿಯು ಮನೋರಮೆಯಿಂದ ಉಂಟಾದುದೆ? ಇದೇ ನಿನ್ನ ಭ್ರಾಂತಿ! ನಿನ್ನ ತಂಗಿಯು ಸಂಜೀವನನ್ನು ಮದುವೆಯಾಗುವುದು ನನಗೆ ಸಂತೋಷವೆ. ನಾನೂ ಮದುವೆಗೆ ಬರುವೆನು.

**ತಾರಾನಾಥ**—ಸಂಜೀವ ಮನೋರಮೆಯರ ದಾಂಪತ್ಯವು ಸುಖಕರವಾಗದೆಂದು ನನ್ನ ಅಂತರ್ಯವು ಹೇಳುತ್ತದೆ. ಜನರು ಆಡಂಬರಕ್ಕೆ ಎಷ್ಟು ಬೇಗ ಮರುಳಾಗುವರು!

**ಮನೋಹರ**—ಪರಿಚಿತ ವಸ್ತುವಿನಲ್ಲಿ ತಾತ್ಸಾರ, ಅಪರಿಚಿತವಾದುದರಲ್ಲಿ ಪುರಸ್ಕಾರವುಂಟಾಗುವುದು ಸ್ವಾಭಾವಿಕ. ಪ್ರತಿದಿನ ಮೂಡಿ ಮುಳುಗುವ ಸೂರ್ಯ ಚಂದ್ರರನ್ನು ನೋಡಲು ಆತುರಪಡುವವರಾರು? ಆದರೆ, ಎಂದಾದರೂ ಒಮ್ಮೆ ಮೂಡುವ ಧೂಮಕೇತುವೆಂದರೆ ಜನರಲ್ಲಿ ಅದೆಷ್ಟು ಉತ್ಸುಕತೆ!

**ತಾರಾನಾಥ**—ಅದು ಹೌದು. ಕಾಲಡಿಯ ಶ್ವೇತಶಿಲೆಯು ಮುರಕಲ್ಲಿಗೆ ಸಮ. ದೂರದ ಬೋರ್ಗಲ್ಲಾದರೂ ಮನೋಹರ! ನೀನು ಹೇಳಿದಂತೆ ಸಂಜೀವನು ಮನೋರಮೆಗೆ ಧೂಮಕೇತುಪ್ರಾಯನಾಗುವನೆಂಬ ಭೀತಿಯು ಈಗ ನನ್ನಲ್ಲಿ ಬಲವಾಗಿದೆ.

**ಮನೋಹರ**—ಛೆ! ಛೆ! ಏನೆಲ್ಲಾ ಅಶುಭ ನುಡಿಯುವೆ? ಅವರ ದಾಂಪತ್ಯವು ಚಿರ ಸುಖದಾಯಕವಾಗಲಿ! ಎಂಥವನನ್ನಾದರೂ ಮಾರ್ಪಡಿಸುವ ವಿಚಿತ್ರ ಶಕ್ತಿಯು ವಿವಾಹಕ್ಕಿರುವುದು.

**ತಾರಾನಾಥ**—ವಿಚಾರದ ಗೊಡವೆಯೇ ಇಲ್ಲದ ಸ್ವೇಚ್ಛಾಚಾರದಿಂದ ಇರುವ ಪಶುಗಳನ್ನು ಏನು ತಾನೆ ಮಾರ್ಪಡಿಸಬಲ್ಲುದು?

**ಮನೋಹರ**—ಮೊದಲೇ ಹೀಗೆ ನಿರ್ಧರಿಸಿಬಿಡುವುದು ಶುದ್ಧ ತಪ್ಪು. ('ವಾಚು' ನೋಡಿ) ಹೊತ್ತಾಯಿತು. ಇಂದು ಯುವಕ ಸಂಘದ ಸಭೆಯಿದೆ. ಅಲ್ಲಿ ನನಗೆ ಪ್ರಹಸನ ಪದ್ಯವೊಂದನ್ನು ಹಾಡಲಿದೆ. ನೀನೂ ಬರುವೆಯಾ?

**ತಾರಾನಾಥ**—ನಿಜವಾಗಿಯೂ ನಿನ್ನ ಮನೋನಿಗ್ರಹವು ವಿಚಿತ್ರವಾದುದು! ಇಂದು ನೀನು ಪ್ರಹಸನ ಪದ್ಯ ಹಾಡಬಲ್ಲೆಯಾ?

**ಮನೋಹರ**—'ಬೇಶಾ'ಗಿ ಹಾಡಬಲ್ಲೆನು! ನೋಡು ಬಾ.

(ಕೈಹಿಡಿದು ಕರೆದುಕೊಂಡು ಹೋಗುವನು.)

---

# ೩ನೇ ದೃಶ್ಯ

[ತಾರಾನಾಥನು ಉಡುಪಿಯ ವಕೀಲ ಶ್ರೀನಿವಾಸ ಶೆಟ್ಟರ ವಿದ್ಯಾವತಿ ಪುತ್ರಿ ಇಂದಿರೆಯನ್ನು ವಿವಾಹವಾಗುವನು. ಅವನ ಸೋದರ ಮಾವನು ಮೃತನಾಗುವನು. ಮಾವನ ವೈಕುಂಠ ಸಮಾರಾಧನೆಯ ವಿಷಯದಲ್ಲಿ ತಾರಾನಾಥನಿಗೂ ಅವನ ತಾಯಿ ತುಂಗಮ್ಮ ಮತ್ತು ತಂಗಿ ಮನೋರಮೆಗೂ ವಾದವಾಗುವುದು.]

**ತಾರಾನಾಥ**—ಒಬ್ಬನೇ ಮಾವ, ಮುದಿ ಪ್ರಾಯದಲ್ಲಿ ಸತ್ತವರು, ಸಂಭ್ರಮದಿಂದ 'ಬೊಜ್ಜ' ಮಾಡಬೇಕೆಂದು ಎಂಟ್ನೂರು ರೂಪಾಯಿ ವರೆಗೆ ವೆಚ್ಚಮಾಡಿ ಸಿಕ್ಕಿದವರಿಗೆಲ್ಲಾ ತಿನ್ನಿಸಿದ್ದಾಯಿತು. ಭಾವನು ಐನೂರು ಹೊರೆಗಳ ಆಡಂಬರಕ್ಕಾಗಿ ಕಡಿಮೆಯೆಂದರೆ ಮುನ್ನೂರು ರೂಪಾಯಿ ವ್ಯಯಮಾಡಿರಬಹುದು. ಈ ದಂಭಾಚಾರದಿಂದ ಏನು ಸಾರ್ಥಕವೊ ನನಗೆ ತಿಳಿಯದು.

**ತುಂಗಮ್ಮ**—ಎಲ್ಲವೂ ದಂಭಾಚಾರ ನಿನಗೆ! ನಿನ್ನ ಹೆಂಡತಿಮನೆಯವರು ಒಂದು ಹೊರೆ ಸಹ ಕಳುಹಿಸಲಿಲ್ಲವೆಂದೋ? ಇಷ್ಟೊಂದು ಗೌಜಿಯಿಂದ ಹೊರೆ ಬಂದುದು ನಾನು ನೋಡಿಯೂ ಇಲ್ಲ, ಕೇಳಿಯೂ ಇಲ್ಲ. ಅಣ್ಣನಂತಹ 'ಭರಮಿ'ನ ಮನುಷ್ಯನಿಗೆ 'ವೈಕುಂಠ' ಮಾಡದಿದ್ದರೆ ಜನರು ಏನು ಹೇಳಿಯಾರು?

**ತಾರಾನಾಥ**—ಜನರು ಬೇಕಾದ್ದು ಹೇಳಿಕೊಳ್ಳಲಿ! 'ಬೊಜ್ಜ' ಮಾಡಿದುದೇ ಸಾಕು. ಇನ್ನು 'ವೈಕುಂಠ' ಬೇಡ.

**ತುಂಗಮ್ಮ**—ಈಗ ನಿನಗೆ ಯಾವುದೂ ಬೇಡ. ನಿನ್ನ ಹೆಂಡತಿಯಾಯಿತು; ನೀನಾಯಿತು. ಇಡೀ ದಿನ ಉಪ್ಪರಿಗೆಯಲ್ಲಿ ನೀವೇನು ಮಾಡುತ್ತಿರುವುದೋ ತಿಳಿಯದು. ಅವಳು ಒಂದೂ ಕೆಲಸಮಾಡಲಿಕ್ಕಿಲ್ಲ. ವಕೀಲರ ಮಗಳಲ್ಲವೆ? ಇಂತಹ ಗೊಂಬೆಗಳನ್ನು ತಂದಿಟ್ಟುಕೊಂಡರೆ ಮನೆಗೆ ಮತ್ತೆ ಹಾರೆ ಗುದ್ದಲಿ ಹಾಕುವುದು ಬೇಡ!

**ತಾರಾನಾಥ**—ಏನು! ಅವಳೇನು ಮಾಡಿದಳು? ಮನೋರಮೆ, ನಿನಗಿದು ಸರಿ ತೋರುವುದೆ?

**ಮನೋರಮೆ**—ಅಮ್ಮಾ, ಹಾಗೆಲ್ಲಾ ಮಾತಾಡಬಾರದು! ಕಲಿತವಳು! ವಕೀಲರ ಮಗಳು! ಅವಳನ್ನು ಮೂರ್ತಿಯಂತೆ ಇಟ್ಟು, ಹೂಹಾಕಿ ಪೂಜೆ ಮಾಡುವ!

**ತಾರಾನಾಥ**—ನೀನೂ ಅಮ್ಮನ ನಾಲಿಗೆ ನೇರಿಬಿಟ್ಟೆಯೇ?

**ತುಂಗಮ್ಮ**—ಮಗನು, ಹೆತ್ತು ಹೊತ್ತು ಸಲಹಿದ ತಾಯಿಯ ಕೈ ಬಿಟ್ಟು, ನಿನ್ನೆ ಬಂದ ಹೆಂಡತಿಯ ಮಾತಿನಂತೆ ಕುಣಿಯುತ್ತಿರುವಾಗ ಮಗಳಾದರೂ ತಾಯಿಯ ಪಕ್ಷ ಹಿಡಯಬಾರದೇ?

**ತಾರಾನಾಥ** - ನಾನು ಹೆಂಡತಿ ಹೇಳಿದಂತೆ ಕುಣಿದುದೇನು?

**ತುಂಗಮ್ಮ**—ಅದನ್ನೆಲ್ಲಾ ಹೇಳಿ ಕೇಳಿ ಪ್ರಯೋಜನವಿಲ್ಲ. ನನ್ನ ಮನಸ್ಸಿಗೂ ಆ 'ಜುಮಾದಿ'ಗೂ ಗೊತ್ತು ಅದು! ಅದಂತಿರಲಿ. ಈಗ ಅಣ್ಣನ 'ವೈಕುಂಠ' ಬೇಗನೆ ಆಗಬೇಕು. ನಾನು ಸಂಜೀವನಿಗೆ ಜನ ಕಳುಹಿಸಿದ್ದೇನೆ. ಅವನು ಬರುವಾಗ ನಾರಾಯಣ ತಂತ್ರಿಗಳನ್ನು ಕರೆದುಕೊಂಡೇ ಬಂದಾನು. ಇಂಗ್ಲಿಷ್ ಕಲಿತ ನಿಮ್ಮ ಮಾತನ್ನೆಲ್ಲಾ ಕೇಳಿದರೆ ಸಂತಾನ ನಿಸ್ಸಂತಾನವಾಗಿ ಹೋದೀತು!

**ತಾರಾನಾಥ**—ಕ್ಷೌರ ಮಾಡಿಸಿ ದಿನ ಕೇಳಿದಂತೆ ಮಾಡುವುದನ್ನೆಲ್ಲಾ ಮಾಡಿ ಅನಂತರ ನನ್ನೊಡನೆ ಕೇಳುವುದೇ?

[ಸಂಜೀವ, ನಾರಾಯಣ ತಂತ್ರಿಗಳ ಪ್ರವೇಶ. ತುಂಗಮ್ಮ ಮನೋರಮೆಯರು ಸಂತೋಷದಿಂದ ಎದ್ದು ನಿಲ್ಲುವರು. ತಾರಾನಾಥನೂ ಎದ್ದು ಸುಮ್ಮನೆ ನಿಲ್ಲುವನು.]

**ಸಂಜೀವ**—ತಂತ್ರಿಗಳೇ, ಕುಳಿತುಕೊಳ್ಳಿ. (ತುಂಗಮ್ಮನೊಡನೆ) ತಂತ್ರಿಗಳಿಗೆ ಸೀಯಾಳ ತರಿಸಿರಿ,—ಬಾಯಾರಿಕೆಯಾಗುತ್ತದೋ ಏನೋ.

**ತುಂಗಮ್ಮ**—(ಗಡಿಬಿಡಿಯಿಂದ) ಸುಬ್ಬ, ಸುಬ್ಬ, (ಕರೆಯುತ್ತ ಒಳ ಸರಿಯುವಳು.)

**ನಾರಾಯಣ ತಂತ್ರಿ**—ಸೀಯಾಳ ಕೊಯ್ಯುವುದಾದರೆ ಬೆಳೆದುದನ್ನು ಕೊಯ್ಯಲಿ, ಹೋಗು, ಹೇಳು. ಸಂಜೀವ, ಹೇಳು. ಎಳತು ಪ್ರಯೋಜನವಿಲ್ಲ.

**ತಾರಾನಾಥ**—(ನಕ್ಕು) ಅದೇನು ಸ್ವಾಮಿ? ಬೆಳೆದ ಸೀಯಾಳದಲ್ಲಿ ನೀರು ಕಡಿಮೆಯಲ್ಲವೇ?

**ನಾರಾಯಣ ತಂತ್ರಿ**—ನಮಗೆ ಬಾಯಾರಿಕೆಗೆ ನೀರಾಗಬೇಕು; ಪದಾರ್ಥಕ್ಕೆ ಕಾಯಿಯಾಗಬೇಕು.

**ತಾರಾನಾಥ**—ಹಾಗಾದರೆ ತೆಂಗಿನಕಾಯಿ ಕೊಟ್ಟರಾಗದೆ?

**ನಾರಾಯಣ ತಂತ್ರಿ**—ಮತ್ತೂ ಒಳ್ಳೇದಾಯಿತು

**ತುಂಗಮ್ಮ**—(ಪ್ರವೇಶಿಸಿ) ಸುಬ್ಬ ಎಲ್ಲಿ ಸತ್ತಿದ್ದಾನೋ ಏನೋ! ತಾರಾನಾಥ, ಸ್ವಲ್ಪ ಹೋಗಿ ಕರೆಯಪ್ಪ! ಪಾಪ! ತಂತ್ರಿಗಳಿಗೆ ಎಷ್ಟು ಬಾಯಾರಿಕೆಯಾಗುತ್ತದೊ ಏನೊ! ಹೋಗು, ಬೇಗ ಹೋಗು

**ತಾರಾನಾಥ**—ಇಷ್ಟು ಗಡಿಬಿಡಿ ಏಕೆ? ತಂತ್ರಿಗಳಿಗೆ ಸೀಯಾಳವೇ ಆಗಬೇಕೆಂದಿಲ್ಲ. ತೆಂಗಿನಕಾಯಿಯೂ ಆದೀತಂತೆ. ಅವರ 'ಬಾಯಾರಿಕೆ'ಯೇ ಬೇರೆ.

**ತುಂಗಮ್ಮ**—ಹಾಗಾದರೆ, ನಾಲ್ಕು ತೆಂಗಿನಕಾಯಿಗಳನ್ನಾದರೂ ತಂದು ಕೊಡು.

**ತಾರಾನಾಥ**—ಹೋಗುವಾಗ ಕೊಟ್ಟರೆ ಸರಿ. ಏನು ಅವಸರ?

**ನಾರಾಯಣ ತಂತ್ರಿ**—ಆಯಿತು. ಹೋಗುವಾಗ ಕೊಟ್ಟರೆ ಸಾಕು. ಈಗ ಗಡಿಬಿಡಿ ಬೇಡ. ತಮ್ಮಯ ಶೆಟ್ಟಿಗೆ 'ವೈಕುಂಠ' ಸಮಾರಾಧನೆಯಾಗಬೇಕೆಂದು ಸಂಜೀವ ಹೇಳಿದ. ಆಗಬೇಕಪ್ಪ ಆ ಪುಣ್ಯಾತ್ಮನಿಗೆ.

**ತಾರಾನಾಥ**—ತಂತ್ರಿಗಳೇ, ನನಗೆ ನಿಮ್ಮೊಡನೆ ಸ್ವಲ್ಪ ಮಾತನಾಡಲಿದೆ.

**ನಾರಾಯಣ ತಂತ್ರಿ**—ಧಾರಾಳ ಮಾತನಾಡಬಹುದು. ನಾವು ನಿಮ್ಮವರೇ ಆಗಿದ್ದೇವೆ. ತಮ್ಮಯ ಶೆಟ್ಟಿಗೂ ನನಗೂ ಇದ್ದ ಸ್ನೇಹವೆಂದರೆ ಅಷ್ಟಿಷ್ಟಲ್ಲ. ನಾನು ಹೊಸಮನೆ ಕಟ್ಟಿಸುವಾಗ ಒಂದು ದೊಡ್ಡ ಹಲಸಿನ ಮರ, ನಾಲ್ಕು ತಾಳಿ ಮರ ಸಹಾಯ ಮಾಡಿದ್ದಾನೆ. ಮಹಾರಾಯ! ಒಳ್ಳೆಯವ.

**ತಾರಾನಾಥ**—ಅದಂತಿರಲಿ. ವೈಕುಂಠ ಸಮಾರಾಧನೆ ಎಂದರೇನು?

**ನಾರಾಯಣ ತಂತ್ರಿ**—ವೈಕುಂಠವೆಂದರೆ ವಿಷ್ಣುವಿನ ಲೋಕ. ಸತ್ತ ಮೇಲೆ ಜೀವವು ನೆಟ್ಟಗೆ ವಿಷ್ಣುಸಾನ್ನಿಧ್ಯಕ್ಕೆ ಸೇರುವಂತೆ ಸಹಾಯಮಾಡುವ ಸಂಸ್ಕಾರವೇ ವೈಕುಂಠ ಸಮಾರಾಧನೆ.

**ತಾರಾನಾಥ**—ವಿಷ್ಣುವೆಂದರೆ ಯಾರು?

**ನಾರಾಯಣ ತಂತ್ರಿ**—ವಿಷ್ಣುವೆಂದರೆ ಯಾರು! ಇದೇನು ಪ್ರಶ್ನೆ! ವಿಷ್ಣುವೆಂದರೆ ದೇವರು! ಪರಮಾತ್ಮ! ಪರಬ್ರಹ್ಮ!

**ತಾರಾನಾಥ**—ಮತ್ತೆ ಈಶ್ವರನೆಂದರೆ ಯಾರು?

**ನಾರಾಯಣ ತಂತ್ರಿ**—ಈಶ್ವರನೆಂದರೆ ಬೇರೆ. ಅವನು ಕೈಲಾಸವಾಸಿ. ಶಂಭು, ಶಿವ, ಶಂಕರನೆಂದೂ ಅವನಿಗೆ ಹೆಸರಿದೆ.

**ತಾರಾನಾಥ**—ಹಾಗಾದರೆ, ಅವರು ಬೇರೆಬೇರೆಯೇ?

**ನಾರಾಯಣ ತಂತ್ರಿ**—ಹೌದು. ಬೇರೆ ಬೇರೆ. ವಿಷ್ಣು ಲಕ್ಷ್ಮೀ ರಮಣ. ಈಶ್ವರ ಪಾರ್ವತೀವಲ್ಲಭ.

**ತಾರಾನಾಥ**—ಸರಸ್ವತಿಯ ಗಂಡನೊಬ್ಬನಿದ್ದಾನಲ್ಲ? ಅವನೆಲ್ಲಿರುವುದು?

**ನಾರಾಯಣ ತಂತ್ರಿ**—ಇದ್ದಾನೆ, ಬ್ರಹ್ಮ. ಅವನಿರುವುದು ಬ್ರಹ್ಮ ಲೋಕದಲ್ಲಿ.

**ತಾರಾನಾಥ**—ಇವರಲ್ಲಿ ಯಾರು ಶ್ರೇಷ್ಠರು? ಯಾವ ಲೋಕ ಮೇಲಾದುದು?

**ನಾರಾಯಣ ತಂತ್ರಿ**—ವಿಷ್ಣುವೇ ಶ್ರೇಷ್ಠ. ವೈಕುಂಠವೇ ಮೇಲು.

**ತಾರಾನಾಥ**—ನೀವು ಶೈವರೋ ವೈಷ್ಣವರೋ?

**ನಾರಾಯಣ ತಂತ್ರಿ**—ವೈಷ್ಣವರು.

**ತಾರಾನಾಥ**—ನಾವು ಶೈವರು ಸ್ವಾಮಿ. ನನ್ನ ಮಾವನೂ ಶೈವ. ರುದ್ರಾಕ್ಷೀ ಸರ ಧರಿಸಿ ವಿಭೂತಿ ಹಚ್ಚುತ್ತಿದ್ದರು. 'ಶಿವ ಶಿವ' ಎಂದೇ ಸದಾ ಧ್ಯಾನಿಸುತ್ತಿದ್ದರು. ಅಂದಮೇಲೆ ನಾವೇಕೆ ವೈಕುಂಠ ಸಮಾರಾಧನೆ ಮಾಡಬೇಕು? ಕೈಲಾಸ ಸಮಾರಾಧನೆ ಮಾಡಿದರಾಗದೆ?

**ನಾರಾಯಣ ತಂತ್ರಿ**—ವಿಚಾರ ಮಾಡಿದರೆ ಎಲ್ಲಾ ಒಂದೆ. ಏನು ಮಾಡಿದರೂ ಹೋಗುವುದು ಒಬ್ಬನಿಗೇನೇ. "ಸರ್ವದೇವನಮಸ್ಕಾರ: ಕೇಶವಂ ಪ್ರತಿ ಗಚ್ಛತಿ."

**ತಾರಾನಾಥ**—ಆ ಒಬ್ಬನಾರು? ಅವನಿಗೆ ಏನಾದರೂ ಏಕೆ ಮಾಡಬೇಗು?

**ನಾರಾಯಣ ತಂತ್ರಿ**—ಇಂಗ್ಲಿಷ್ ಕಲಿತ ನಿಮ್ಮ ಮಾತು ಕೇಳಿದರೆ ಏನೂ ಇಲ್ಲ.

**ತಾರಾನಾಥ**—ಏನೂ ಇಲ್ಲ ಏಕೆ? ಇರುವುದೆಲ್ಲಾ ಇದೆ. ಇಲ್ಲದುದು ಯಾವುದೂ ಇಲ್ಲ.

**ನಾರಾಯಣ ತಂತ್ರಿ**—ಆ ವೇದಾಂತ ಕೇಳುವುದಕ್ಕೆ ಬಂದಿಲ್ಲ ನಾನು ಹೊತ್ತಾಯಿತು. ಐತಪ್ಪಶೆಟ್ರ ಮನೆಗೆ ನಿಮಿತ್ತ ಹೇಳುವುದಕ್ಕೆ ಹೋಗ

ಬೇಕು. ಅನಂತರ ರಾಮಣ್ಣಾಳ್ವರ ಓಟದ ಕೋಣಕ್ಕೆ ಹಗ್ಗ ಮಂತ್ರಿಸಲಿಕ್ಕೆ ಇದೆ. ವೈಕುಂಠ ಸಮಾರಾಧನೆ ಆಗಬೇಕೋ ಬೇಡವೋ ಹೇಳಿ.

**ತುಂಗಮ್ಮ**—ಆಗಬೇಕು ಸ್ವಾಮಿ, ಅವಶ್ಯ ಆಗಬೇಕು. ಅದಕ್ಕಾಗಿಯೇ ನಿಮ್ಮನ್ನು ಕರೆಸಿದುದು.

**ಸಂಜೀವ**—ಮುಖ್ಯವಾಗಿ ಅದಕ್ಕೆ ಏನೇನು ಬೇಕು ಹೇಳಿ.

**ನಾರಾಯಣ ತಂತ್ರಿ**—ಅದಕ್ಕೆ ಭೂದಾನ ಮತ್ತು ಗೋದಾನ ಮುಖ್ಯ. ಇನ್ನು ಬೇರೆ ದಾನಗಳು ಹಲವು ಬೇಕಾಗಿವೆ ಅವುಗಳ ಪಟ್ಟಿಯನ್ನು ಮಾಡಿ ಕೊಡುತ್ತೇನೆ.

**ತಾರಾನಾಥ**— ಖರ್ಚಿಗೆ ಎಷ್ಟು ಬೇಕಾದೀತು?

**ನಾರಾಯಣ ತಂತ್ರಿ**—ಅದು ಅವರವರ ಮನೆತನ, ಗೌರವಗಳನ್ನು ಹೊಂದಿಕೊಂಡಿದೆ. ನಿಮ್ಮ ಘನಸ್ತಿಕೆಗೆ ಕನಿಷ್ಠಪಕ್ಷ ಐನೂರು ರೂಪಾಯಿ ಆದರೂ ಬೇಕು.

**ತಾರಾನಾಥ**—ಸಿಕ್ಕಸಿಕ್ಕವರ ಹೊಟ್ಟೆ ತುಂಬಿಸುವ ಘನಸ್ತಿಕೆಗೆ ಬೆಂಕಿ ಬೀಳಲಿ! ಮೂಢ ಜನರ ಅಂಧ ಶ್ರದ್ಧೆಯನ್ನು ಹುರಿಗೊಳಿಸಿ ಉದರಪೋಷಣೆ ಮಾಡುವ ನಿಮ್ಮ ಈ ವೃತ್ತಿಯು ಮಣ್ಣುಗೂಡಲಿ! ನಿಮ್ಮ ಹೊಟ್ಟೆ ತುಂಬಿಸಿ, ನಿಮಗೆ ಭೂದಾನ, ಗೋದಾನ ಮೊದಲಾದ ದಾನಗಳನ್ನು ಕೊಟ್ಟು, ಕೈ ತುಂಬಾ ದಕ್ಷಿಣೆಯಿತ್ತು, ಸಂತೋಷಗೊಳಿಸಿದರೆ ಮಾತ್ರ ಆತ್ಮನಾಗಲಿ, ಪರಮಾತ್ಮನಾಗಲಿ ಸಂತೃಪ್ತಿ ಹೊಂದುವರೆಂಬುದು ಲೋಕದ ಸೋಜಿಗಗಳಲ್ಲಿ ಅತ್ಯಂತ ಸೋಜಿಗವು. ಜನಸಾಮಾನ್ಯರನ್ನು ಸುಲಿಯುವುದಕ್ಕಾಗಿ ನಿಮ್ಮ ಪೂರ್ವಜರು ಇಚ್ಛಾನುಸಾರ ಕಲ್ಪಿಸಿ ಬರೆದಿಟ್ಟಿರುವ ಪುರಾಣ ಶಾಸ್ತ್ರಗಳೇ ನಿಮ್ಮ ಪಿತ್ರಾರ್ಜಿತವು. ನೀವು ಜನತೆಯ ತಲೆಯೊಳಗೆ ತುರುಕಿಸಿರುವ ನಾನಾ ವಿಧಿ ನಿಯಮಗಳೇ ನಿಮ್ಮ ಪಿತ್ರಾರ್ಜಿತವನ್ನು ಭದ್ರಗೊಳಿಸುವ ಭವ್ಯ ಕೋಟೆಯು. ಜನರು ಸದ್ವಿಚಾರದ ಫಿರಂಗಿಗಳಿಂದ ಇದನ್ನು ಎಂದು ಭೇದಿಸುವರೊ! ಒಳಗಿರುವ ಸತ್ಯವೆಷ್ಟೆಂಬುದನ್ನು ಶೋಧಿಸಿ ನೋಡುವರೊ ದೇವರೇ ಬಲ್ಲ!

**ನಾರಾಯಣ ತಂತ್ರಿ**—ಅಯ್ಯೋ, ಇದೇನು ದೈವದ್ರೋಹ! ರಾಮ, ರಾಮ! ಸಂಜೀವ, ಇಂತಹ ಧರ್ಮದ್ರೋಹವನ್ನು ಕೇಳಲಿಕ್ಕಾಗಿಯೇ ನೀನು

ನನ್ನನ್ನು ಕರೆದುಕೊಂಡು ಬಂದುದೇ? ಅಹ! ಕಲಿಯುಗದಲ್ಲಿ ಧರ್ಮದ ಇದ್ದ ಒಂದು ಕಾಲೂ ಕಡಿಯಲ್ಪಡುವುದೆಂಬುದು ಇಂದಿಗೆ ನಿಶ್ಚಯವಾಯಿತು. ಸಂಜೀವ, ನೀನೇಕೆ ಮೂರ್ತಿಯಂತೆ ಸುಮ್ಮನಿರುವೆ? ಇನ್ನು ನಿಲ್ಲಲಾರೆ, ಹೋಗುತ್ತೇನೆ.

**ಸಂಜೀವ**—ನಿಮ್ಮನ್ನು ಕರೆದುಕೊಂಡು ಬಂದ ಮೇಲೆ ಯಾರು ಏನು ಹೇಳಿದರೂ ನಾನು ವೈಕುಂಠ ಸಮಾರಾಧನೆಯನ್ನು ಮಾಡಿಸಿಯೇ ಬಿಡುವೆನು. ನಾನು ಅತ್ತೆಯ ಹೇಳಿಕೆ ಪ್ರಕಾರ ನಿಮ್ಮನ್ನು ಕರೆದುಕೊಂಡು ಬಂದುದು.

(ತಾರಾನಾಥನು ಸಿಟ್ಟಿನಿಂದ ಹೋಗಿಬಿಡುವನು.)

**ತುಂಗಮ್ಮ**—ಸಂಜೀವ, ತಾರಾನಾಥ ಮತ್ತು ಅವನ ಹೆಂಡತಿಯ ಉಪದ್ರವದಿಂದ ನಮಗೆ ಉಳಿಗಾಲವಿಲ್ಲ. ಅವರಿಗೆ ದೈವ ದೇವರು, ಗುರು ಹಿರಿಯರು, ನೀತಿ ಧರ್ಮವೆಂಬುದೇನೂ ಇಲ್ಲ

**ನಾರಾಯಣ ತಂತ್ರಿ**—ಶುದ್ಧ ನಾಸ್ತಿಕ! ತುಂಗ, ನಿನ್ನ ಮಗ ಶುದ್ಧ ನಾಸ್ತಿಕ! ಅವನಿಂದ ನಿನ್ನ ಮನೆ ಒಳ್ಳೇದಾಗಲಿಕ್ಕಿಲ್ಲ. ನಿನ್ನ ಕುಟುಂಬ ಉದ್ಧಾರವಾಗಲಿಕ್ಕಿಲ್ಲ. ಪುಣ್ಯಶಾಲಿಗಳಾದ ಹಿರಿಯರೇನಾದರೂ ಮಾಡಿಟ್ಟದ್ದಿದ್ದರೆ ಅವನು ಮುಟ್ಟಿದಲ್ಲಿ ಮಾಯವಾಗಿ ಹೋದೀತು! ಇರಲಿ. ಪಟ್ಟಿ ನಿನ್ನ ಹೆಸರಲ್ಲಿರುವುದಲ್ಲವೇ?

**ತುಂಗಮ್ಮ**— ಇವನ ಕಥೆ ಹೀಗಾಯಿತು. ಇವನ ಹೆಂಡತಿಯೊಬ್ಬಳಿದ್ದಾಳೆ ಇವನಿಗಿಂತ ಜೋರಿನವಳಪ್ಪ! ಇವರ ಕಾಟದಿಂದ ನನಗಂತೂ ಪೂಜೆ, ಪುರಸ್ಕಾರ, ಕೋಲ, ತಂಬಿಲ ಒಂದೂ ಮಾಡಿಸಲಿಕ್ಕಿಲ್ಲ. ಯಾವಾಗ ಅಣ್ಣ ಸತ್ತನೋ, ಅಂದೇ ನನ್ನ ಅರ್ಧ ಜೀವ ಹೋಗಿದೆ. ಈಗ ತಂತು ಮಾತ್ರ ಉಂಟು.

**ಸಂಜೀವ**—ನಿಮಗೆ ಯಾವ ವ್ಯಥೆಯೂ ಬೇಡ. ವೈಕುಂಠ ಸಮಾರಾಧನೆ ನಾನು ಮಾಡಿಸುವೆನು. ತಂತ್ರಿಗಳೇ, ನೀವು ನಾಳೆಯೇ ದಾನ ಸಾಹಿತ್ಯಾದಿಗಳ ಪಟ್ಟಿಯೊಂದನ್ನು ಮಾಡಿ ತನ್ನಿರಿ. ಈ ತಿಂಗಳಲ್ಲಿ ಇಪ್ಪತ್ತು ಹೋಗುವಾಗಲೇ ವೈಕುಂಠ ಸಮಾರಾಧನೆ ಮಾಡುವ. ಈಗ ಹೋಗಿ ಸ್ವಾಮಿ.

**ನಾರಾಯಣ ತಂತ್ರಿ**—ಆಯಿತು ಸಂತೋಷ. ನಾಳೆಯೇ ಬರುವೆನು. ನನ್ನ ತೆಂಗಿನಕಾಯಿಯೆಲ್ಲಿ?

**ತುಂಗಮ್ಮ**—ಓಹೋ! ತರುತ್ತೇನೆ. (ಒಳಗೆ ಹೋಗಿ ಎರಡು ತೆಂಗಿನ ಕಾಯಿ ತಂದು ಕೊಡುವಳು.)

**ನಾರಾಯಣ ತಂತ್ರಿ**—ನಾಲ್ಕು ಕೊಡುತ್ತೇನೆಂದು ಹೇಳಿದ್ದಲ್ಲವೇ?

**ಸಂಜೀವ**—ಸಾಕಪ್ಪ! ಈಗ ಹೋಗಿ. ಎಷ್ಟು ಕೊಟ್ಟರೂ ನಿಮಗೆ ಸಾಲದು.

(ತಂತ್ರಿ ಹೋಗುವನು. ಇತರರೂ ಹೋಗುವರು.)

---

## ೪ನೇ ದೃಶ್ಯ.

[ತಾರಾನಾಥನು ತನ್ನ ಕೋಣೆಯಲ್ಲಿ ಚಿಂತಾಮಗ್ನನಾಗಿ ಕುಳಿತಿರುವನು.]

**ತಾರಾನಾಥ**—ದೇವರು ಮಾನವನಿಗೆ ವಿಚಾರಶಕ್ತಿಯನ್ನೇಕೆ ಕೊಟ್ಟನೋ ತಿಳಿಯದು! ಅವನೂ ಇತರ ಪ್ರಾಣಿಗಳಂತೆ ಸೃಷ್ಟಿಸಲ್ಪಡುತ್ತಿದ್ದರೆ ಮಾನವ ಸಮಾಜವು ಇಷ್ಟೊಂದು ಕೃತಕ, ವಂಚಕ, ಅಸ್ವಾಭಾವಿಕ ಜೀವನವುಳ್ಳುದಾಗುತ್ತಿದ್ದಿತೇ? ನನ್ನಲ್ಲಂತೂ ವಿಚಾರ ಪ್ರಕಾಶವು ಹೆಚ್ಚಿದಂತೆ ಅತೃಪ್ತಿ ತಾಪವು ಅಧಿಕವಾಗುತ್ತಿರುವುದು. ಅಂತಶ್ಶಾಂತಿಯು ಮಾಯವಾಗುತ್ತಿರುವುದು.

**ಇಂದಿರೆ**—(ಪ್ರವೇಶಿಸಿ) ಪ್ರಿಯಾ, ಇಂದು ಏಕೆ ಎಷ್ಟೊಂದು ಚಿಂತಾಕುಲರಾದಂತಿರುವಿರಿ?

**ತಾರಾನಾಥ**—(ಥಕ್ಕನೆ ಮುಖಮುದ್ರೆಯನ್ನು ಮಾರ್ಪಡಿಸಿ) ಚಿಂತೆಯೇ? ಎಲ್ಲಿ? ನಿನ್ನಂತಹ ಪ್ರಿಯತಮೆಯನ್ನು ಪಡೆದಿರುವ ನನಗೆಲ್ಲಿಯ ಚಿಂತೆ?

**ಇಂದಿರೆ**—ಈ ನಟನೆಯೆಲ್ಲಾ ಬೇಡ. ನಾನು ಅದನ್ನೂ ತಿಳಿಯಲಾರದ ಹಳ್ಳಿಯ ಹುಡುಗಿಯೆಂದು ಭಾವಿಸಿದಿರಾ?

**ತಾರಾನಾಥ**—ನೀನು ವಕೀಲರ ಮಗಳು, ಪಟ್ಟಣದಲ್ಲಿ ಹುಟ್ಟಿ ಬೆಳೆದವಳು, ವಿದ್ಯಾವತಿ, ವಿಚಾರವತಿ ಎಂದೇ ನಾನು ನಿನ್ನನ್ನು ವರಿಸಿದುದು. ಅಲ್ಲದೆ ನಿನ್ನ ಈ ರೂಪಕ್ಕಲ್ಲ.

**ಇಂದಿರೆ**—ಪ್ರಿಯಾ, ಹೀಗೇಕೆ ಪರಿಹಾಸ್ಯ ಮಾಡುವಿರಿ? ನಾವು ನಮ್ಮ ನಡತೆಗೆ ಜವಾಬ್ದಾರರಲ್ಲದೆ ರೂಪಕ್ಕಲ್ಲ.

**ತಾರಾನಾಥ**--ಹ! ಒಳ್ಳೇ ನಡತೆ! ಏಳುವಾಗ ಎಂಟು ಘಂಟೆಯಂತೆ! ಇಡೀ ದಿವಸ ಉಪ್ಪರಿಗೆಯಲ್ಲಿ ಗಂಡನೊಂದಿಗೆ ಸರಸ ಸಲ್ಲಾಪವಂತೆ! ಅಡಿಗೆ ಯೆಂವರೆ ಏನೆಂದು ಗೊತ್ತಿಲ್ಲವಂತೆ! ಚಿನ್ನದ-ಗೊಂಬೆಯಂತೆ!

**ಇಂದಿರೆ**--ಯಾರು?

**ತಾರಾನಾಥ**— ಇಂದಿರೆ. ಮತ್ತಾರು?

**ಇಂದಿರೆ**—ಯಾರು ಹೇಳುವುದು?

**ತಾರಾನಾಥ**—ಅವಳ ಅತ್ತೆ ಮತ್ತು ನಾದಿನಿ.

**ಇಂದಿರೆ**—ಒಹೋ! ಅದಕ್ಕಾಗಿ ನೀವೀಗ ಚಿಂತಿಸುತ್ತಿದ್ದುದೇ? ಪ್ರತ್ಯಕ್ಷಕ್ಕೆ ಪ್ರಮಾಣ ಬೇಕೇ? ನೀವೇ ನೋಡುತ್ತೀರಲ್ಲ?

**ತಾರಾನಾಥ**—ಪ್ರಿಯೆ, ಆ ವಿಷಯದಲ್ಲಿ ನೀನು ಚಿಂತಿಸಬೇಡ. ನಾನು ವಿನೋದಕ್ಕಾಗಿ ಹೇಳಿದೆನು. ಅಷ್ಟೆ. ವಿದ್ಯಾವತಿ ಸ್ತ್ರೀಯರು ಶೋಭೆಯ ಗೊಂಬೆಗಳು, ಬೆಡಗು ಬಿನ್ನಾಣ ಮಾತ್ರವೇ ಅವರಿಗೆ ಗೊತ್ತು, ಅಡಿಗೆ, ಮನೆ ಕೆಲಸ ಎಂದರೆ ಆಗದು ಎಂಬ ದುರಭಿಪ್ರಾಯವು ಈಗ ಜನರಲ್ಲಿ ದೃಢವಾಗಿ ಬೇರೂರಿರುವುದು. ಅತ್ತೆ ಸೊಸೆಯರ ಸಂಗತಿಯಂತೂ ಗಾದೆಯ ಮಾತಾಗಿ ಹೋಗಿರುವುದು. ಸೊಸೆಯು ತನ್ನ ದಾಸಿಯಾಗಿದ್ದರೇನೇ ಅತ್ತೆಗೆ ಸಂತೋಷ. ಅವಳು ಏನಾದರೂ ಸ್ವಲ್ಪ ಸ್ವಾತಂತ್ರ್ಯ ತೋರಿಸಿದರೆ ತೀರಿತಲ್ಲಿಗೆ.

[ಮನೋಹರನು ಪ್ರವೇಶಿಸುವನು.]

**ಮನೋಹರ**—ಇದೇನು ಅತ್ತೆ ಸೊಸೆಯರ ಕಾಳಗದ ಪ್ರಸ್ತಾವ?

**ತಾರಾನಾಥ**—ಏನೂ ಇಲ್ಲ.

**ಮನೋಹರ**—ಯಾಕೆ ಇಲ್ಲ? ಊರೆಲ್ಲಾ ಹಬ್ಬಿದೆ ಸಮಾಚಾರ!

**ತಾರಾನಾಥ**—ಯಾವ ಸಮಾಚಾರ?

**ಮನೋಹರ**—'ತಾರಾನಾಥನು ಇಂದಿರೆಯ ದಾಸ; ಮನೆಯಲ್ಲಿ ಅತ್ತೆ ಸೊಸೆಯರ ಕಾದಾಟ'ವೆಂದು.

**ಇಂದಿರೆ**—ನಿಮಗಾರು ಹೇಳಿದರು?

**ಮನೋಹರ**—ನನ್ನವಳು ಒಬ್ಬಳು ಇದ್ದಾಳಲ್ಲ? ಅವಳಿಗೆ ಇದೇ ಕೆಲಸ. ಎಷ್ಟು ಹೇಳಿದರೂ ಇಲ್ಲ. ಸಿಕ್ಕಿದವರ ಸಂಗತಿಯನ್ನೆಲ್ಲಾ ಸಿಕ್ಕಿಸಿಕ್ಕಿದವರೊಡನೆ ಕೇಳಿ ಹೆಕ್ಕಿಕೊಳ್ಳುವುದು. ಅನಂತರ ದೊಡ್ಡ ಸಂಭ್ರಮವೆಂತ

ಊಟ ಮಾಡುವಾಗ ಕಡು ವೈಯಾರದಿಂದ ಅದನ್ನು ನನ್ನ ಕಿವಿಯಲ್ಲಿ ಹಾಕು ವುದು.

**ಇಂದಿರೆ**— ಇದನ್ನು ನೀವು ನಂಬಿದಿರಾ?

**ಮನೋಹರ**—ನಾನು ಅಷ್ಟು ಹಿತ್ತಾಳೆಕಿವಿಯವನೆಂದು ತಿಳಿದೆಯಾ? ಈ ಹೆಂಗುಸರ ಕಥೆಯೇ ಇಷ್ಟು. ತಮ್ಮ ಪಂಗಡಕ್ಕೆ ಸೇರದ, ಹೊಸ ರೀತಿ ನೀತಿಯವರ ಮೇಲೆ ಅಸೂಯೆಪಟ್ಟು ಕಾಗೆಗಳಂತೆ ನಾನಾ ಸುದ್ದಿ ಹಬ್ಬಿಸು ವುದು. ಮತ್ಸರವೆಂದರೆ ಅವರು ಕೊಟ್ಟರೆ ಉಂಟು.

**ತಾರಾನಾಥ**—ಮಿತ್ರ, ಅದನ್ನೇ ನಾವೀಗ ಮಾತಾಡುತ್ತ ಇದ್ದುದು. ಇಂದಿರೆಯ ಹೊಸ ರೀತಿ ನೀತಿಗಳನ್ನು ನನ್ನ ತಾಯಿಗೂ, ತಂಗಿಗೂ ಕಂಡರೆ ಆಗುವುದಿಲ್ಲ ಅವರು ಇವಳನ್ನು ಜರೆಯದ ದಿನವೇ ಅಪರೂಪ. ಇವಳು ಏನು ಮಾಡಿದರೂ ಅವರಿಗೆ ಆಗುವುದಿಲ್ಲ.

**ಇಂದಿರೆ**—ಹೌದು! ನಾನು ಮುಂಜಾನೆ ಬೇಗ ಎದ್ದು ಮನೆಗೆಲಸ ಮಾಡಿದರೆ, 'ಏನು ಉಮೇದಪ್ಪಾ ಇವಳಿಗೆ! ಇದು ಕಡೆತನಕ ಬಂದೀತೆ?' ಎನ್ನುವರು. ಸ್ವಲ್ಪ ತಡವಾಗಿ ಎದ್ದರೆ, 'ಏಳುವುದು ಎಂಟು ಗಂಟೆಗೆ, ಮಡ್ಡ ಮಳ ಮರ್ಜಿ' ಎನ್ನುವರು. ಪ್ರಾಯದ ಹೆಂಗುಸು ಗಂಡನೊಡನೆ ತುಟಿಯೆತ್ತಿ ಮಾತಾಡಬಾರದಂತೆ! ಪರಪುರುಷರ ಮುಖವನ್ನು ಕಣ್ಣೆತ್ತಿ ನೋಡಬಾರ ದಂತೆ! ಮನೆ ಬಿಟ್ಟು ಹೊರಗೆ ಕಾಲಿಡಬಾರದಂತೆ! ಒಂದಿಷ್ಟು ಓದಿದರೆ 'ಅದರಲ್ಲಿ ಏನು ಹೊಟ್ಟೆ ತುಂಬುವುದೇ? ಮೊದಲಿನ ಹೆಂಗುಸರೆಲ್ಲಾ ಓದು ತ್ತಿದ್ದರೆ? ಇದೆಲ್ಲಾ ಈಗಿನ ವೇಷ!' ಎಂಬ ಸಿಡುಕು. ಆರಾಮವಿದ್ದಾಗ ಬೇಸರ ಕಳೆಯಲೆಂದು 'ಹಾರ್ಮೋನಿಯಮ್' ಹಿಡಿದು ಸ್ವಲ್ಪ ಹಾಡಿದರೆ ಅದು ಕರ ಕರೆಯಂತೆ; ಗರತಿಯರ ಲಕ್ಷಣವಲ್ಲವಂತೆ. ಒಳ್ಳೇ ಸೀರೆಯನ್ನು ಉಟ್ಟು ಕೊಂಡು ಸ್ವಚ್ಛವಾಗಿದ್ದರೆ 'ನಿತ್ಯಕ್ಕೆ ಈ ಶೃಂಗಾರವೇಕೆ' ಎಂದಾಗುವುದು! ಒಟ್ಟಾರೆ, ನಾನು ಏನು ಮಾಡಿದರೂ ತಪ್ಪು! ಇಷ್ಟರ ವರೆಗೆ ಇದನ್ನೆಲ್ಲಾ ತಾಳಿಕೊಂಡಿದ್ದೆನು. ಆದರೆ, ಇವರೊಡನೆಯೇ ಬಾರಿ ಬಾರಿ ದೂರುವಾಗ ಊರೆಲ್ಲಾ ಈ ಸಂಗತಿ ಹಬ್ಬಿರುವಾಗ—ನಾನು ಸುಮ್ಮನಿರುವುದು ಹೇಗೆ?

**ಮನೋಹರ**—ಇದನ್ನು ನಾನು ಮೊದಲೇ ಬಲ್ಲೆ. ಅತ್ತೆಯಂದಿರು ತಾವು ಸೊಸೆಯಂದಿರಾಗಿದ್ದಾಗ, ತಮ್ಮನ್ನು ತಮ್ಮ ಅತ್ತೆಯಂದಿರು

ಯಾವ ರೀತಿ ಕಾಣಬೇಕೆಂದು ಆಶಿಸುತ್ತಿದ್ದರೋ, ಅದೇ ರೀತಿ ಅವರು ತಮ್ಮ ಸೊಸೆಯರನ್ನು ಕಾಣುವಂತಾದರೆ ಈ ಅತ್ತೆಸೊಸೆಯರ ಕಾಳಗವೆಂಬ ಗಾದೆಗೇನೇ ಆಸ್ಪದವುಂಟಾಗುತ್ತಿದ್ದಿಲ್ಲ. ಇಂದಿರೆ, ನಿನಗೆ ಈ ವಿಷಯದಲ್ಲಿ ವ್ಯಥೆ ಬೇಡ. ತಾರಾನಾಥನು ನಿನ್ನ ಸದ್ಗುಣಗಳನ್ನೆಲ್ಲಾ ಚೆನ್ನಾಗಿ ಬಲ್ಲನು. ನನ್ನವಳಂತಹ ಕಾಡುಹಕ್ಕಿಯೊಂದು ಅವನಿಗೆ ಸಂಘಟನೆಯಾಗುತ್ತಿದ್ದರೆ ಕುತ್ತಿಗೆಗೆ ಹಗ್ಗ ಹಾಕಿಕೊಳ್ಳುತ್ತಿದ್ದನೋ ಏನೋ! ನಾವು ವಿದ್ಯಾರ್ಥಿಗಳಾಗಿದ್ದಾಗ ಎಂತಹ ಗಗನ ಗೋಪುರ ಕಟ್ಟಿಕೊಂಡಿದ್ದವು! ವಾಸ್ತವಿಕ ಜೀವನದಲ್ಲಿ ಆ ತಿರುಕ ಸ್ವಪ್ನವೆಲ್ಲಾ ಮಾಯವಾಗಿರುವುದು. ನಿನ್ನನ್ನು ಪತ್ನಿಯನ್ನಾಗಿ ಪಡೆದ ತಾರಾನಾಥನೊಬ್ಬನೇ ನಮ್ಮಲ್ಲಿ ಭಾಗ್ಯಶಾಲಿಯು.

**ತಾರಾನಾಥ**—ಅದಂತಿರಲಿ, ಈಗ ಮನೋರಮೆಗೆ ಅಸ್ವಸ್ಥವಂತೆ. ಈಗತಾನೆ ಅವಳ ಗಂಡನ ಮನೆಯಿಂದ ಜನ ಬಂದಿದೆ.

**ಮನೋಹರ**—ಏನು ಕಾಯಿಲೆ?

**ತಾರಾನಾಥ**—ಏನೆಂದು ಹೇಳಲಿ? ಚಿಕ್ಕಂದಿನಲ್ಲಿ ದೃಢಕಾಯೆಯಾಗಿ ಕಾಯಿಲೆ ಏನೆಂದು ಅರಿಯದ ಅವಳು ಈಗ ಯಾವಾಗಲೂ ಹಾಸಿಗೆ ಹಿಡಿದಿರುವಂತಾಗಿದೆ. ಬಹು ಕಷ್ಟದಿಂದ ಹೆತ್ತ ಅವಳ ಹೆಣ್ಣು ಮಗುವಿಗೆ ಹುಟ್ಟಿದಾರಭ್ಯ ಸೌಖ್ಯವಿಲ್ಲ. ಸಂಜೀವನ ದುರಾಚಾರಕ್ಕಾಗಿ ಮನೋರಮೆಯೂ ಅವಳ ಮಗುವೂ ಈಗ ರೋಗದಿಂದ ನರಳಬೇಕಾಗಿದೆ.

**ಮನೋಹರ**—ಅಹಹ! ಇದೀಗ ಅತಿ ವಿಷಾದಕರ! ನೀನು ಮನೋರಮೆಯನ್ನು ನೋಡುವುದಕ್ಕೆ ಹೋಗುವೆಯಾ?

**ತಾರಾನಾಥ**—ಹೌದು, ನಾನೂ ಅಮ್ಮನೂ ನಾಳೆ ಹೋಗುವೆವು. ನಾನು ಇಷ್ಟರ ತನಕ ಭಾವನ ಮನೆಗೆ ಹೋಗಲಿಲ್ಲ. ಈಗ ಹೋಗಬೇಕಾಗಿದೆ. ಸಂಜೀವನು ನಿನ್ನ ಹಳೆಯ ಸ್ನೇಹಿತನಲ್ಲವೇ? ನಾವು ಒಟ್ಟಿಗೆ ಹೋಗುವ. ಆಗದೆ?

**ಮನೋಹರ**—ನಾನು ಏಕೆ? ನನಗೆ ಕೆಲಸವಿದೆ. ನಾಳೆ ಒಂದು 'ಕೇಸೂ' (ನಂಬ್ರವೂ) ಇದೆ

**ತಾರಾನಾಥ**—'ಕೇಸು'! ಅದನ್ನು ಬೇರೆ ಯಾರಿಗಾದರೂ ಕೊಟ್ಟು ಬರಲಾಗುವುದಿಲ್ಲವೇ?

**ಮನೋಹರ**—ಸೈ, ಒಳ್ಳೇ ಮಾತು. ತಿಂಗಳಿಗೊಂದೋ ವರ್ಷಕ್ಕೊಂದೋ 'ಕೇಸು' ಬರುವುದು. ಅದನ್ನೂ ಬಿಟ್ಟರೆ ಚಿಲೋದಾಯಿತು. ನಾನು ಬಂದರೆ ಸಂಜೀವನಿಗೂ ಸಂತೋಷವಾಗದು, ಅದಂತಿರಲಿ. ಈ ಹೊತ್ತು ಗವರ್ನಮೆಂಟ್ 'ಕೊಲಿಜ್ ಡೇ' ಅಲ್ಲವೇ?

**ತಾರಾನಾಥ**—ಹೌದು, ಬೇಗ ಹೋಗುವ. ಕಡೆಗೆ ಸ್ಥಳ ಸಿಗುವಂತಿಲ್ಲ.

**ಮನೋಹರ**—ಇಂದಿರೆಯೂ ಬರಲಿ. ಅಲ್ಲಿ ಪುರುಷರಿಗಿಂತಲೂ ಸ್ತ್ರೀಯರಿಗೇನೇ ಮಾನ್ಯತೆ ಹೆಚ್ಚು.

**ಇಂದಿರೆ**—ನನ್ನನ್ನು ಕರೆದುಕೊಂಡು ಹೋಗಲು ಅವರಿಗೆ ಧೈರ್ಯ ಎಲ್ಲಿಂದ? ಹಿಂದಿನಂತೆ ಈಗೀಗ ಸಂಜೆ ಹೊರಕರೆದುಕೊಂಡು ಹೋಗುವುದೂ ನಿಂತಿದೆ.

**ಮನೋಹರ**—ತಾರಾನಾಥ, ನಿಜವೆ? ದೊಡ್ಡ ತತ್ವ ಮಾತ್ರ ಸಾರುವುದೇ? ತಾನಾಗಿ ಆಚರಿಸಲಿಕ್ಕಿಲ್ಲವೇ?

**ಇಂದಿರೆ**—ಅದು ಅಷ್ಟೆ! ವೈಕುಂಠ ಸಮಾರಾಧನೆ ಮಾಡಬಾರದೆಂದು ಇವರು ಹಠ ಹಿಡಿಸುದೇ ಬಂತು. ಅತ್ತೆ ಅಣ್ಣ ಕೂಡಿ ಮಾಡಿಸಿಯೇ ಬಿಟ್ಟರು. ಇವರು ಬಾಯಿಯಲ್ಲಿ ಹೇಳುತ್ತಿರುವುದು; ಅವರು ಕಾರ್ಯದಲ್ಲಿ ಮಾಡುತ್ತಲೇ ಇರುವುದು.

**ತಾರಾನಾಥ**—ಅದಂತಿರಲಿ. ನೀನು ನಿನ್ನ ಹೆಂಡತಿಯನ್ನು ಏಕೆ ಕರೆತರಲಿಲ್ಲ?

**ಮನೋಹರ**—ಏನು? ಅವಳನ್ನು ಪಂಜರದಲ್ಲಿಟ್ಟು ತರುವುದೇ? ಒಂದು ವಾರದಿಂದ ಆರಂಭಿಸಿದ್ದೇನೆ ಬೋಧಿಸಲಿಕ್ಕೆ! ಈ ಹೊತ್ತು ಬೆಳಿಗ್ಗಿನಿಂದ ನನಗೆ ಅದೇ ಕೆಲಸ. ಕಡೆಗೆ ನಾನೇ ಸೀರೆ ಕುಪ್ಪಸ ತೆಗೆದುಕೊಂಡು, ಧರಿಸೆಂದು ಬಲಾತ್ಕಾರ ಮಾಡಿದೆ. ಕಾಡುಬೆಕ್ಕದು, ಕೇಳುವುದೇ? ಇಂದಿರೆಯಂತಹ ವಿದ್ಯಾವತಿ ಪತ್ನಿಯು ನನಗಿರುತ್ತಿದ್ದರೆ ಅವಳನ್ನು 'ಬಾರ್‌ರೂಮಿಗೂ' ನನ್ನೊಂದಿಗೆ ಕರೆದೊಯ್ಯುತ್ತಿದ್ದೆ.

**ತಾರಾನಾಥ**—('ವಾಚು' ನೋಡಿ) ಈಗ ಹೊತ್ತಾಯಿತು. ಇಂದಿರೆಯ ಶೃಂಗಾರಕ್ಕೆ ಕಡಿಮೆಯೆಂದರೆ ಒಂದು ತಾಸು ಬೇಕು. ಇನ್ನೊಂದು ಸಲ ನೋಡುವ. ಈಗ ನಾವು ಹೋಗುವ.

**ಇಂದಿರೆ**—ನೆವನಕ್ಕೇನೊ ಕಡಿಮೆಯಿಲ್ಲ. ನೀವು ನಿಮ್ಮ ಮುಖ ತೊಳೆದು 'ಕೂಂಬ್' ಮಾಡಿ (ತಲೆಬಾಚಿ) 'ಡ್ರೆಸ್' ಮಾಡುವಾಗ ನಾನು ಎರಡೆರಡು ಸಲ ಶೃಂಗಾರ ಮಾಡಿಕೊಂಡೇನು. (ಒಳಗಿನಿಂದ ತುಂಗಮ್ಮನು 'ಇಂದು! ಇಂದು!' ಎಂದು ಕರೆಯುವುದು ಕೇಳಿಬರುವುದು.)

**ತಾರಾನಾಥ**—ಅಮ್ಮ ಕರೆಯುತ್ತಾಳೆ, ಹೋಗು. (ಇಂದಿರೆಯು ಹೋಗುವಳು.)

**ಮನೋಹರ**—ತತ್ವ ಎಲ್ಲಾ ಅನ್ಯರಿಗೆ ಅಲ್ಲವೆ? ಆಗಲಿ, ಹೋಗು, 'ಡ್ರೆಸ್' ಮಾಡು, ಹೋಗುವ.

---

## ೫ನೇ ದೃಶ್ಯ

[ಸಂಜೀವನು ತನ್ನ 'ಶೈನಾತಿ' ಚಂದು ಶೆಟ್ಟಿಯೊಡನೆ ತನ್ನ ದುಷ್ಕೃತ್ಯಗಳ ಒಳ ಸಂಚಿನ ಕುರಿತು ಆಲೋಚಿಸುವನು.]

**ಸಂಜೀವ**—ಮನೋರಮೆಗೆ ಈಗೀಗ ಕಾಯಿಲೆ ತಪ್ಪಲಿಕ್ಕೇ ಇಲ್ಲ.

**ಚಂದು**—ಹೇಗೆ ತಪ್ಪುವುದು? ನಿಮಗೆ ಆಗದ ರೋಗವಾವುದು? ಮಗುವಿನ ಕಣ್ಣೂ ಆಗುವ ಹಾಗಿಲ್ಲ.

**ಸಂಜೀವ**—ಬಾಯಿಗೆ ಬಂದಂತೆ ಬಗುಳಬೇಡ. ನಾನೀಗ ಸೌಖ್ಯವಾಗಿಲ್ಲವೆ?

**ಚಂದು**—ಹೌದು, ಸೌಖ್ಯವಾಗಿದ್ದೀರಿ! ಕೊಳೆತ ಕುಂಬಳಕಾಯಿ!

**ಸಂಜೀವ**—ನಿನಗೆ ನಾನು ಸಲುಗೆಕೊಟ್ಟುದು ಹೆಚ್ಚಾಯಿತು. ಹೀಗೆಲ್ಲಾ ನಾಲಿಗೆಗೆ ಸ್ವಾತಂತ್ರ್ಯ ಕೊಟ್ಟರೆ ನೋಡಿಕೋ!

**ಚಂದು**—ಆಯಿತು, ನೋಡಿಕೊಳ್ಳುತ್ತೇನೆ

**ಸಂಜೀವ**—ಏನಂದೆ!

**ಚಂದು**—ನಾಲಿಗೆಗೆ ಸ್ವಾತಂತ್ರ್ಯ ಕೊಡದಂತೆ ನೋಡುತ್ತೇನಂದೆ.

**ಸಂಜೀವ**—ಹಾಗೆ ಬಾ. ಚಂದು, ಆ ಗಾಣಿಗ ಸುಬ್ಬನು ಈಗ ನಾಗಿಯ ಯೋಚನೆಯನ್ನು ಬಿಟ್ಟಿದ್ದಾನೋ ಇಲ್ಲವೋ?

**ಚಂದು**—(ಮೌನ)

**ಸಂಜೀವ**—(ತಲೆ ಹಿಡಿದು ಕುಲುಕಿ) ಏನೋ ಶನಿ? ಮಾತಾಡೋ.

**ಚಂದು**—ನಾಲಿಗೆಗೆ ಸ್ವಾತಂತ್ರ್ಯ ಕೊಡಬಾರದೆಂದು ಬಂಧನದಲ್ಲಿ ಇಟ್ಟಿದ್ದೇನೆ

**ಸಂಜೀವ**—ಹೆಣದತ್ತ, ಮಾತಾಡೋ! ಕಂಡಾಬಟ್ಟೆ ಮಾತಾಡಬಾರ ದೆಂದು ಹೇಳಿದ್ದಲ್ಲದೆ ಮಾತಾಡಲೇ ಬಾರದೆಂದು ಹೇಳಿದುದೆ?

**ಚಂದು**—ಆ ಸುಬ್ಬ, ಆ ನಾಯಿ, ಈಗ ಊರೆಲ್ಲಾ ಡಂಗುರ ಹೊಡೆ ಯುತ್ತಾ ಬರುತ್ತಾನೆ.

**ಸಂಜೀವ**—ಏನೆಂದು?

**ಚಂದು**—ಮತ್ತೇನೆಂದು? ತನ್ನ ಹೆಂಡತಿಯನ್ನು ಶೆಟ್ರು ಕೆಡಿಸಿದ್ದಾ ರೆಂದು. ಅವನಿಗೆ ನಾಚಿಕೆಯೂ ಇಲ್ಲ.

**ಸಂಜೀವ**—ಅವನ ಕಾಲು ಮುರಿಸಿ ಹಾಕಲಿಕ್ಕೆ ನಿನ್ನಿಂದಾಗಲಿಲ್ಲ! ನೀನೊಬ್ಬ!

**ಚಂದು**—ಸಾಯಲಿ ಪಾಪ, ಎಲ್ಲಿಯಾದರೂ ಕೂಲಿಕೆಲಸ ಮಾಡಿ ಬದುಕಿಕೊಳ್ಳಲಿ!

**ಸಂಜೀವ**—ಅದು ಆಯಿತಲ್ಲಾ, ನಮ್ಮ ಮನೆಯವರದು ಏನು ಆಲೋಚನೆ ನಡೆದಿದೆ?

**ಚಂದು**—ಅವರೂ ಜೋರಾಗಿದ್ದಾರೆ. ನೀವು ಅವರಿಗೆ ಅನ್ನ ಕೊಡುವುದಿಲ್ಲವೆಂದು ಸಿಕ್ಕಿಸಿಕ್ಕಿದವರೊಡನೆ ಸಾರುತ್ತಿದ್ದಾರೆ. ದೊಡ್ಡಮನೆ ಮಹಾಬಲ ಶೆಟ್ರನ್ನು ಪಂಚಾಯಿತಿಕೆಗೆ ಕರೆತರಲಿರುವರಂತೆ. ಅವರಿಗೆ ಈಗ ಕೊಡುವ ಕಜೆ ಅಕ್ಕಿಯನ್ನೂ ನಿಲ್ಲಿಸಿಬಿಡಬೇಕು.

**ಸಂಜೀವ**—ಹಾಗೆಯೇ ಮಾಡು. ಅವರು ಮಾಡುವುದನ್ನು ಮಾಡಲಿ. ಮಹಾಬಲ ಶೆಟ್ಟೆ ಏಕೆ? ಮಹಾರಾಜ ಬೇಕಾದರೂ ಬರಲಿ, ನೋಡುವ! ತಾಯಿ ಪಟ್ಟಾದಾರಳಾಗಿ ಇರುವ ವರೆಗೆ ಸರ್ವಾಧಿಕಾರ ನನ್ನದು. ನನ್ನ ಇಚ್ಛೆಯಂತೆ ನಾನು ನಡೆಯಬಹುದು. ನನ್ನನ್ನು ಕೇಳಲು ಮಹಾಬಲ ಶೆಟ್ಟೆ ಯಾರು?

**ಚಂದು**—ಕುಟುಂಬದವರು ವ್ಯಾಜ್ಯಮಾಡಿದರೆ?

**ಸಂಜೀವ**—ಹೌದು ವ್ಯಾಜ್ಯ! ಅದೇನು ಊಟವೊ? ಅದಕ್ಕೆ ಧನಜನ

ಸಹಾಯಬೇಕು. ಈ ನಾಯಿಗಳ ಹತ್ತಿರ ಏನಿದೆ? ಎಲ್ಲಾ ಭೂಭಾರಕ್ಕೆ ಹುಟ್ಟಿದವು. ಒಂದು ವೇಳೆ ವ್ಯಾಜ್ಯ ಮಾಡಿದರೂ ಆಗುವುದೇನು? ಅದರ ಭೀತಿ ನನಗಿಲ್ಲ. ಅದಂತಿರಲಿ, ಆ ಕೃಷ್ಣಭಟ್ಟ ಅವನ ಆಸ್ತಿಯನ್ನು ನನಗೆ ಬರೆದು ಹಾಕುವ ಕುರಿತು ಏನು ಹೇಳಿದ?

**ಚಂದು**—ನೀವು ಬರೇ ಎರಡು ಸಾವಿರ ರೂಪಾಯಿ ಕೊಡುವುದಂತೆ. ಐದಾರು ಸಾವಿರ ಕೊಡುವವರು ಬೇರೆ ಇದ್ದಾರಂತೆ.

**ಸಂಜೀವ**—ಹೌದು, ಬೇರೆ ಅವನ ಅಪ್ಪಂದಿರು! ನನ್ನ ಎದುರು ಬರಲು ಯಾರಿಗೆ ಧೈರ್ಯವಿದೆ? ಚಂದು, ಅವನ ಒಕ್ಕಲುಗಳೊಡನೆ ನಾನು ಹೇಳುವ ವರೇಗೆ ಈ ವರ್ಷದ ಗೇಣಿಯನ್ನು ಯಾರೂ ಕೊಡಬಾರದೆಂದು ಹೇಳು. ನೋಡುವ, ಅವನ ದರ್ಪ ಎಲ್ಲಿಯ ವರೇಗೆ ನಡೆಯುತ್ತದೆಂತ!

---

# ೬ನೇ ದೃಶ್ಯ

[ಸಂಜೀವನ ಮನೆ. ಮನೋರಮೆಯು ಸ್ವಲ್ಪ ಸೌಖ್ಯ ಹೊಂದಿ ಕುಳಿತಿರುವಳು. ತುಂಗಮ್ಮನೂ ಅವಳೊಂದಿಗಿರುವಳು. ತಾರಾನಾಥನು ಮನೋರಮೆಯನ್ನು ಬೀಳ್ಕೊಳ್ಳುವನು]

**ತಾರಾನಾಥ**—ಮನೋರಮೆ, ಈಗ ನಿನಗೆ ಸ್ವಲ್ಪ ಸೌಖ್ಯವಾಗಿರುವುದು ಸಕಾಲದಲ್ಲಿ ಡಾಕ್ಟರರನ್ನು ತರಿಸಿ ಔಷಧಿ ಮಾಡಿಸದೆ ಇರುತ್ತಿದ್ದರೆ ನಿನ್ನ ಅವಸ್ಥೆ ಏನಾಗುತ್ತಿದ್ದಿತೋ ಏನೋ!

**ತುಂಗಮ್ಮ**—ಅವಳ ಗ್ರಹಗತಿ ಈಗ ಬಹಳ ಕೆಟ್ಟದು. ತಂತ್ರಿಗಳು ಜಾತಕ ನೋಡಿ ಹೇಳಿದರು. ಅದಕ್ಕೆ ಮೃತ್ಯುಂಜಯ ಹೋಮ ಮಾಡಿಸಬೇಕಂತೆ. ನಾನು ನಮ್ಮ ಜುಮಾದಿಗೆ ಒಂದು ಕೋಲವನ್ನೂ, ತಿರುಪತಿಗೆ ಹೋಗುವ ಹರಕೆಯನ್ನೂ ಹೇಳಿಕೊಂಡಿದ್ದೇನೆ. ದೇವರ ದಯೆಯಿಂದಲೂ, ಗುರುಹಿರಿಯರ ಪುಣ್ಯದಿಂದಲೂ ಮನೋರಮೆಯು ಹೇಗಾದರೂ ಬದುಕಿಕೊಂಡಳು. ಅವಳ ಮಗುವಿಗೆ ಬೇಗನೆ ತುಲಾಭಾರವನ್ನು ತೂಗಿಸಬೇಕೆಂದು ತಂತ್ರಿಗಳು ಹೇಳಿದ್ದಾರೆ. ಅದರ ದೆಶೆಯೂ ಈಗ ಬಹಳ ಕೆಟ್ಟದಂತೆ.

**ಮನೋರಮೆ**—ಅಣ್ಣಾ, ನೀನು ಕರೆಸಿದ್ದ ಡಾಕ್ಟರರು ಬಲು ಒಳ್ಳೆಯವರು ಅವರು ಅಲ್ಲದಿರುತ್ತಿದ್ದರೆ ನನ್ನ ಪಾಡು ಏನಾಗುತ್ತಿತ್ತೋ!

**ತಾರಾನಾಥ**—ಅವರು ನನ್ನ ಪೂರ್ವ ಪರಿಚಿತರು. ಇನ್ನು ಮುಂದೆಯೂ ನೀನು ಬಹಳ ಜಾಗ್ರುತೆಯಿಂದ ಇರಬೇಕು. ಅಸಡ್ಡೆ ಮಾಡಬಾರದು. ನೀನು ಯಾವಾಗ ಜನ ಕಳುಹಿಸಿದರೂ ಅವರು ಬಂದು ಪರೀಕ್ಷಿಸಿ ಔಷಧವನ್ನು ಕೊಡಲು ಸಿದ್ಧರಿರುವರು

**ಮನೋರಮೆ**—ಅಣ್ಣಾ, ನಿನ್ನ ಭಾವನಿಗೆ ಸ್ವಲ್ಪ ಬುದ್ಧಿ ಹೇಳಿ ಹೋಗು. ಮನೆಯಲ್ಲಿ ನನ್ನ ಕಣ್ಣೆದುರಲ್ಲೇ ತರತರದ ಅನಾಚಾರಗಳು ನಡೆಯುತ್ತಿವೆ. ಒಂದೆಡೆ ಕುಟುಂಬದ ಗೋಳಿದ್ದಿದೆ. ಅವರಿಗೆ ಅಕ್ಕಿ ಕೊಡುವುದನ್ನೂ ನಿಲ್ಲಿಸಿರುವರು. ನಾನು ಹೇಳಿದರೆ, 'ಹೆಂಗಸರಿಗೆ ಪಂಚಾಯತಿಕೆಯನ್ನು ಕೊಟ್ಟವರು ಯಾರು' ಎಂದು ಗದರಿಸುವರು.

[ಸಂಜೀವನು ಪ್ರವೇಶಿಸುವನು.]

**ತಾರಾನಾಥ**—ಭಾವ, ನಾನು ಹೋಗುವೆನು. ಇಂದಿರೆಯೊಬ್ಬಳೇ ಮನೆಯಲ್ಲಿರುವಳು. ಮನೋರಮೆಗೂ ಈಗ ಸ್ವಲ್ಪ ಸೌಖ್ಯವಾಗಿರುವುದು.

**ಸಂಜೀವ**—ಆಯಿತು.

**ತಾರಾನಾಥ**—ಆದರೆ ಕೆಲವು ಮಾತುಗಳನ್ನು ನಿನಗೆ ಹೇಳಬೇಕೆಂದಿರುವೆನು.

**ಸಂಜೀವ**—ಹೇಳು.

**ತಾರಾನಾಥ**—ಸಿಟ್ಟಾಗಲಾರದಷ್ಟೆ?

**ಸಂಜೀವ**— ಸಿಟ್ಟೇನು?

**ತಾರಾನಾಥ**—ಮನೋರಮೆಯ ಈ ಘನರೋಗಕ್ಕೂ, ನಿನ್ನ ಮಗುವಿನ ಕಣ್ಣುನೋವಿಗೂ ಮೂಲಕಾರಣರಾರೆಂಬುದನ್ನು ಬಲ್ಲೆಯಾ?

**ಸಂಜೀವ**—ಯಾರು, ನಾನೇ?

**ತಾರಾನಾಥ**—ಹೌದು, ನೀನೇ. ಬೇಕಾದರೆ ಡಾಕ್ಟರರೊಡನೆ ಕೇಳು. ನಾನು ಕಲ್ಪಿಸಿ ಹೇಳುವುದಲ್ಲ. ನಿನ್ನ ದುಷ್ಕರ್ಮದ ಫಲವನ್ನು ನಿನ್ನ ನಿರ್ದೋಷಿ ಹೆಂಡತಿಯೂ, ಮಕ್ಕಳೂ, ಮುಂದೆ ನಿನ್ನ ಮೊಮ್ಮಕ್ಕಳು ಮರಿಮಕ್ಕಳೇ ಮೊದಲಾದ ತಲತಲಾಂತರದವರೂ ಅನುಭವಿಸಬೇಕಾಗುವುದೆಂಬುದನ್ನು ಸ್ವಲ್ಪವಾದರೂ ವಿಚಾರಿಸಿರುವೆಯಾ? ಮದುವೆಯ ಮೊದಲು ಅಷ್ಟೊಂದು ಆರೋಗ್ಯಶಾಲಿನಿಯಾಗಿದ್ದ ಮನೋರಮೆಯು ಇಂದು ರೋಗದ

ಬೇರಿನಂತಾಗಿರುವಳು. ಇನ್ನು ನಿನ್ನ ಮಗುವಿನ ವಿಷಯದಲ್ಲಿ ಪ್ರತ್ಯಕ್ಷಕ್ಕೆ ಪ್ರಮಾಣಬೇಡ. ಅದರ ಕಣ್ಣು ಸರಿಯಾಗುವುದು ಕಷ್ಟಸಾಧ್ಯವೆಂದೇ ಡಾಕ್ಟರರ ಅಭಿಮತ. ಇಷ್ಟಾದರೂ ನೀನು ನಿನ್ನ ದುರಾಚಾರವನ್ನು ನಿರ್ದಯನಾಗಿ ಮುನ್ನಡೆಸುತ್ತಿರುವೆ ಐಶ್ವರ್ಯ ದರ್ಪದಿಂದ ಹಲವು ಸ್ತ್ರೀಯರನ್ನು ಕೆಡಿಸಿ ಅವರ ಅನ್ನ ತೆಗೆದಿರುವೆ. ಊರಲ್ಲಿ ನಿನ್ನನ್ನು ಒಳ್ಳೆಯವನೆನ್ನುವವನು ಒಬ್ಬನೂ ಇಲ್ಲ. ಎದುರಿನಲ್ಲಿ ಹೆದರಿದರೂ ಹಿಂದಿನಿಂದ ಎಲ್ಲರೂ ನಿನ್ನನ್ನು ನಿಂದಿಸಿ ದ್ವೇಷಿಸುತ್ತಿರುವರು ಸ್ವಕುಟಂಬಕ್ಕೇನೇ ಅನ್ನ ಹಾಕದೆ ನರಳಿಸುತ್ತೀ. ಇದರಿಂದ ಸಿಕ್ಕುವ ಪುರುಷಾರ್ಥವೇನೋ ನನಗೆ ತಿಳಿಯದು. ದೇವರು ನಮಗೆ ಆಸ್ತಿ ಬದುಕನ್ನು ಕೊಡುವುದು ಪರಹಿತಕ್ಕಾಗಿ ಅಲ್ಲದೆ ಪರ ಉಪದ್ರವಕ್ಕಲ್ಲ. ನಮ್ಮ ಈ ಮೂರು ದಿನದ ಬಾಳುವೆಯನ್ನು ಜನೋಪಕಾರದಲ್ಲಿ, ಸತ್ಕಾರ್ಯಕ್ಕಾಗಿ ಕಳೆಯದೆ ಊರಿಗೆ ಒಂದು ಮಾರಿಯಂತಿರುವುದೇ? ನಾನು ನಿರ್ದಾಕ್ಷಿಣ್ಯವಾಗಿ, ಬಿರುಸಾಗಿ ಮಾತಾಡಿದುದನ್ನು ಕ್ಷಮಿಸು. ನಿನ್ನ ಆ ನೀಚ ಚಂದುವಿನ ಸಹವಾಸ ಬಿಟ್ಟು ಇನ್ನಾದರೂ ಒಳ್ಳೆಯವನಾಗು.

**ಸಂಜೀವ**—ಹೂಂ! ಆಯಿತೊ, ಇನ್ನೇನಾದರೂ ಉಳಿದಿರುವುದೊ? ಇದ್ದರೆ ಎಲ್ಲವೂ ಒಮ್ಮೆಯೇ ಹೊರಬರಲಿ. ಮನೆಗೆ ಬಂದು ಇಷ್ಟು ದಿವಸ ಇದ್ದುದಕ್ಕೆ ಏನಾದರೂ ಒಂದು ಕೆಲಸಮಾಡಿ ಹೋಗಬೇಕಲ್ಲವೆ?

**ತಾರಾನಾಥ**—(ಕೋಪದಿಂದ) ನಾನು ನನ್ನ ಮನೆಯಲ್ಲಿ ಅನ್ನವಿಲ್ಲವೆಂದು ನಿನ್ನ ಮನೆಗೆ ಬಂದುದಲ್ಲ. ಮನೋರಮೆ, ಹೋಗುವೆನು. ಅಮ್ಮನಿಗೆ ಎರಡು ಮೂರು ದಿವಸಗಳ ಮೇಲೆ ಜನ ಕಳುಹಿಸುವೆನು.

(ಹೋಗಿಬಿಡುವನು.)

---

# ೭ನೇ ದೃಶ್ಯ

[ತುಂಗಮ್ಮನು ಮನೆಗೆ ಬಂದು ಇಂದಿರೆಯ ಮೇಲಿನ ದ್ವೇಷದಿಂದ ಅವಳ ಮೇಲೆ ಇಲ್ಲದ ತಪ್ಪುಗಳನ್ನು ಹೊರಿಸಿ ದೂರುವಳು.]

**ತುಂಗಮ್ಮ**—ಇಲ್ಲಿ ಪ್ರತಿನಿತ್ಯ ಸಮಾರಾಧನೆ ನಡೆದಿದೆಯೇ? ನಾನು ಹೋಗುವಾಗ ಒಂದು ತಿಂಗಳ ಸಾಮಾನುಗಳನ್ನು ಇಟ್ಟು ಹೋಗಿದ್ದೇನೆ. ಈಗ ಒಂದು ಚೂರೂ ಇಲ್ಲ.

**ಇಂದಿರೆ**—ಹೌದು, ನಾನು ಬ್ರಾಹ್ಮಣರನ್ನು ಕರೆಸಿ ಅನ್ನ ಹಾಕಿಸಿದೆ!

**ತುಂಗಮ್ಮ**—ಬ್ರಾಹ್ಮಣರಿಗೆ ಏಕೆ ಹಾಕುತ್ತಿ? ಹೊಲೆಯರು, ಕೊರಗರು ಇಲ್ಲವೆ? ಪುಣ್ಯ ಸಿಗುವುದು ನೀಚ ಜನರಿಗೆ ಅನ್ನ ಹಾಕುವುದರಿಂದ!

**ಇಂದಿರೆ**—ಬಡವರಿಗೆ ಅನ್ನ ಹಾಕಿದರೇನೇ ಪುಣ್ಯ ದೊರೆಯುವುದು, ಎಷ್ಟು ಕೊಟ್ಟರೂ ತೃಪ್ತರಾಗದ ಉಚ್ಚರೆನಿಸುವ ಬ್ರಾಹ್ಮಣರಿಗೆ ಹಾಕುವುದ ರಿಂದಲ್ಲ.

**ತುಂಗಮ್ಮ**—ಸಾಕು, ಸಾಕು! ಕಲಿತವಳೆಂದು ಹೆಚ್ಚು ಮಾತ ನಾಡಬೇಡ.

**ಇಂದಿರೆ**—ನಾನೇನು ಹೆಚ್ಚು ಮಾತನಾಡಿದೆ?

**ತುಂಗಮ್ಮ**—ಹೆಚ್ಚು ಮಾತಾಡಿದುದೆ? ನನ್ನನ್ನು ತುಟಿಯೆತ್ತಬಿಡುವು ದಿಲ್ಲ! ನಿನ್ನದೇ ರಾಜ್ಯ! ನೀನೇ ದೊಡ್ಡ ರಾಣಿ! ಅಬ್ಬಬ್ಬ! ನೀನು ಯಾವಾಗ ಕಾಲಿಟ್ಟೆಯೋ ಆಗಲೇ ಈ ಮನೆಗೆ ಹಿಡಿದಿದೆ ಶನಿ!

**ಇಂದಿರೆ**—ನಾನು ಬಂದು ಹಿಡಿದ ಶನಿ ಏನು?

**ತುಂಗಮ್ಮ**—ಎದುರು ಮಾತನಾಡಬೇಡ! ನಿನ್ನ ಗಂಡ ನೀನು ಹೇಳಿದ ಹಾಗೆ ಕುಣಿಯುತ್ತಾನೆಂದು ಗೊತ್ತುಂಟು!

**ಇಂದಿರೆ**—ಅವರು ನಾನು ಹೇಳಿದ ಹಾಗೆ ಕುಣಿದುದೇನು?

**ತುಂಗಮ್ಮ**—ಕುಣಿದುದೇನು? ನಿನಗೆ ಗೊತ್ತೇ ಇಲ್ಲವೆ? ನೀನು ಎಷ್ಟರವಳು? ನನಗೆ ಎದುರು ಮಾತನಾಡಲು ನಿನಗೆ ಧೈರ್ಯವೆಲ್ಲಿಂದ ಬಂತು? ಈ ಮನೆಗೆ ಬರುವಾಗ ನೀನೇನು ತಂದಿದ್ದಿ? ಏನು ಹತ್ತುಸಾವಿರ ವರದಕ್ಷಿಣೆ

ಕೊಟ್ಟಿದ್ದೆಯೇ? ಅಲ್ಲ, ನೂರಾರು ರೂಪಾಯಿಯ ಬಳುವಳಿ ತಂದಿದ್ದೆಯೇ? ಅಣ್ಣನ ಬೊಜ್ಜಕ್ಕೆ ನಿನ್ನ ಮನೆಯವರು ಒಂದೇ ಒಂದು ಹೊರೆಯನ್ನಾದರೂ ಕಳುಹಿಸಿದ್ದರೇ?

**ಇಂದಿರೆ**—ಅವರೇ ಬೇಡವೆಂದುದಕ್ಕೆ ನಾವೇನು ಮಾಡಬೇಕು?

**ತುಂಗಮ್ಮ**—ಯಾರು? ತಾರಾನಾಥನು ಬೇಡವೆಂದನೇ? ಎಷ್ಟು ಚಂದ ಮಾತನಾಡುತ್ತಿ? ಯಾರಾದರೂ ತನಗೆ ಹೊರೆಬೇಕು, ಹೊರೆಬೇಕು ಎಂದು ಬೇಡುವರೆ? ಸಂಜೀವ ಐನೂರು ಹೊರೆ ಕಳುಹಿಸಿದ್ದನಲ್ಲಾ—ನಾವೇನು ಬೇಕೆಂದು ಕೇಳಿಯೋ? ಅದು ಒಂದು ಮರ್ಯಾದೆ. ನಿಮ್ಮ ಮನೆಯವರಿಗೆ ಮರ್ಯಾದೆಯ ಸಂಗತಿ ಗೊತ್ತಿದ್ದರಲ್ಲವೇ!

**ಇಂದಿರೆ**—ನನ್ನ ವಿಷಯ ಏನು ಬೇಕಾದರೂ ಹೇಳಿ. ಮನೆಯವರ ಸಂಗತಿ ಮಾತನಾಡಬೇಡಿ.

**ತುಂಗಮ್ಮ**—ಏನಾಗುವುದು ಮಾತನಾಡಿದರೆ? ದೊಡ್ಡ ರಾಜರೋ ನಿನ್ನ ಮನೆಯವರು? ಅಪ್ಪನೊಬ್ಬ ವಕೀಲನೆಂದೊ?

**ಇಂದಿರೆ**—ಆಯಿತು, ನೀವೇ ಮಾತಾಡಿ. ನಾನು ಮಾತನಾಡುವುದಿಲ್ಲ.

(ತಾರಾನಾಥನು ಪ್ರವೇಶಿಸುವನು.)

**ತಾರಾನಾಥ**—ಏನಿದು, ಜಗಳವೇನು?

**ತುಂಗಮ್ಮ**—ಏನೂ ಇಲ್ಲ! ನಿನ್ನೊಡನೆ ಹೇಳಿ ಏನು ಪ್ರಯೋಜನ? ನೀನು ಅವಳ ಸಾಲಿಸವನೇ.

**ತಾರಾನಾಥ**—ಹೌದು, ನಾನು ಅವಳ ಸಾಲಿನವನೇ. ನಿನ್ನ ಗಂಡ ನಿನ್ನ ಸಾಲಿನವನೇ ಆಗಿರಲಿಲ್ಲವೇ? ಗಂಡಹೆಂಡಿರು ಒಂದೇ ಸಾಲು ಹಿಡಿಯುವುದು ತಪ್ಪೆ?

**ತುಂಗಮ್ಮ**—ತಪ್ಪಲ್ಲ, ಸರಿ. ಎಲ್ಲಾ ಸರಿ! (ಕಣ್ಣು ಕೆರಳಿಸಿ ಹೋಗುವಳು)

**ತಾರಾನಾಥ**—ಇಂದಿರೆ, ನೀನೇನು ಮಾಡಿದೆ?

**ಇಂದಿರೆ**—ನಾನೇನೂ ಮಾಡಲಿಲ್ಲ. ಅವರು ಬಂದವರೇ ಆರಂಭಿಸಿದ್ದಾರೆ 'ಅದು ಇಲ್ಲ, ಇದು ಇಲ್ಲ' ಎಂದು ದೂರಲಿಕ್ಕೆ. ನಾನು ಒಂದು ತಿಂಗಳ ಸಾಮಾನುಗಳನ್ನು ಹದಿನೈದು ದಿವಸಗಳಲ್ಲಿಯೇ ಖರ್ಚು ಮಾಡಿಬಿಟ್ಟೆನಂತೆ! ಸಿಕ್ಕಿಸಿಕ್ಕಿದವರಿಗೆ ಅನ್ನಹಾಕಿ ಸಮಾರಾಧನೆ ಮಾಡಿದೆನಂತೆ!

**ತಾರಾನಾಥ**—ಆಗಲಿ, ಸುಮ್ಮನಿರು. ಇನ್ನು ಮುಂದೆ ಅವಳೇನು ಮಾತನಾಡಿದರೂ ನೀನು ಎದುರಾಡಬೇಡ.

**ಇಂದಿರೆ**—ನಾನು ಎದುರಾಡಲೇ ಇಲ್ಲ. ಅವರೇ ನನ್ನನ್ನು ಮರ್ಯಾದೆ ಇಲ್ಲದವಳೆಂದು ಬೈದು ಭಂಗಿಸಿದುದು. (ಕಣ್ಣೀರಿಡುವಳು. ಮರೆಯಲ್ಲಿದ್ದ ತುಂಗಮ್ಮನು ರಭಸದಿಂದ ಬಂದು)

**ತುಂಗಮ್ಮ**—ಎದುರಾಡಲೇ ಇಲ್ಲ! ಅವರೇ ನನ್ನನ್ನು ಬೈದುದು! ಅಬ್ಬಬ್ಬ ಏನು ಜಾಣೆಯಪ್ಪ ಇವಳು! ಏನು ಕಣ್ಣುಕಟ್ಟಿನವಳು!

**ತಾರಾನಾಥ**—ಅಮ್ಮಾ, ನಿನ್ನಿಂದ ನನಗೆ ಸುಖವಿಲ್ಲ. ನಾನು ಎಲ್ಲಿಯಾದರೂ ಮನೆಬಿಟ್ಟು ಹೋಗುವುದೇ ಲೇಸೆಂದು ತೋರುತ್ತದೆ.

**ತುಂಗಮ್ಮ**—ನೀನು ್ತ, ನಾನೇ ಹೋಗುವುದು ಒಳ್ಳೇದು! ಆಗ ನೀವಿಬ್ಬರೂ ಸುಖದಲ್ಲಿ ಇರಬಹುದಲ್ಲವೇ? (ಸಿಡುಕಿನಿಂದ ಹೋಗಿಬಿಡುವಳು)

(ತಾರಾನಾಥ ಇಂದಿರೆಯರೂ ಒಳಹೋಗುವರು.)

---

# ೮ನೇ ದೃಶ್ಯ

[ತುಂಗಮ್ಮನ ಮನೆ. ಮನೋರಮೆಯ ಮಗುವಿಗೆ ಉಂಟಾದ ಕಾಯಿಲೆ ಗೋಸುಗ ನಾರಾಯಣ ತಂತ್ರಿಯು ನಿಮಿತ್ತ ನೋಡುವನು. ತಾರಾನಾಥ, ಮನೋಹರ, ಇಂದಿರೆಯರೂ ಒಂದೆಡೆ ಬಂದು ಕುಳಿತುಕೊಳ್ಳುವರು. ತುಂಗಮ್ಮ, ಮನೋರಮೆ, ಸಂಜೀವರು ಇನ್ನೊಂದೆಡೆ ಕುಳಿತುಕೊಂಡಿರುವರು.]

**ನಾರಾಯಣ ತಂತ್ರಿ**—(ಮಂತ್ರ ಹೇಳುತ್ತಾ, ಕಣ್ಣುಮುಚ್ಚಿ ಕೈಯಲ್ಲಿ ಏನನ್ನೋ ಗುಣಿಸಿದಂತೆ ನಟಿಸಿ) ಹೂಂ, ಪ್ರಥಮ ಪ್ರಶ್ನೆ ತುಂಗಮ್ಮನದು. ಬರಲಿ ಒಂದು ರೂಪಾಯಿ.

**ತುಂಗಮ್ಮ**— ತಾರಾನಾಥ, ಕೊಡು. ಮನೋರಮೆಯ ಮಗುವಿನ ವಿಷಯ ಪ್ರಶ್ನೆ ಕೇಳಬೇಕು.

**ತಾರಾನಾಥ**—ನನ್ನ ಕೈಯಲ್ಲಿಲ್ಲ.

**ನಾರಾಯಣ ತಂತ್ರಿ**—ಯಾರಾದರೂ ಬೇಗ ಕೊಡಿರಪ್ಪ! ವಿಷಗಳಿಗೆ ಬರುತ್ತದೆ. ಬೇಗ ಕೊಡಿರಿ. (ಸಂಜೀವನು ಒಂದು ರೂಪಾಯಿ ತೆಗೆದು ಮಣೆಯ

ಮೇಲಿಡುವನು. ತಂತ್ರಿಯು ಮಂತ್ರ ಹೇಳಿ ಕವಡಿ ಮಗುಚಿ ಹಾಕಿ ಎಣಿಸಿ)
ಮಗುವಿಗೆ ನಾಗನ ಉಪದ್ರವ ಉಂಟು.

**ತುಂಗಮ್ಮ**—ಹೌದು, ಅಣ್ಣಾ ತೀರಿಹೋದಂದಿನಿಂದ ನಾಗನಿಗೆ ಪೂಜೆಯಿಲ್ಲ. ನಾಗನ ಕಲ್ಲನ್ನೆ ತಾರಾನಾಥನು ತೆಗೆದು ಬಿಸಾಡುತ್ತಿದ್ದಾಗ ಬೊಬ್ಬೆ ಹಾಕಿ ತಡೆದದ್ದು ನಾನು. ತೋರಿ ಬಂತಲ್ಲಾ ಈಗ ಅದರ ಫಲ!

**ನಾರಾಯಣ ತಂತ್ರಿ**—ಅದು ಆಯಿತಲ್ಲ ಈ ಮನೆಯಲ್ಲಿ ದೇವರ ಗಂಟೊಂದು ಅಪಹಾರವಾಗಿದೆ.

**ತುಂಗಮ್ಮ**—ಸೈ, ಮೊದಲೆ ನಾನು ಹೇಳಿದ್ದೆನಲ್ಲ! ನಾನು ಹೇಳಿದರೆ ಯಾರು ಕೇಳುತ್ತಾರೆ! ಅವರ ಇಂಗ್ಲಿಷ್ ಮರ್ಜಿಯೇ ಅವರಿಗೆ. ಅಲ್ಲವಾದರೆ ತಿರುಪತಿ ದೇವರ ಮುಡುಪನ್ನು ಯಾರಾದರೂ ಕೊರಗರಿಗೆ ಹಂಚಿಯಾರೇ ತಂತ್ರಿಗಳೇ?

**ನಾರಾಯಣ ತಂತ್ರಿ** ರಾಮ, ರಾಮ! ಇದೇನು ಅನರ್ಥವಪ್ಪ!

**ತಾರಾನಾಥ**—ತಿರುಪತಿ ವೆಂಕಟರಮಣನ ಗಂಟನ್ನು ಬಡ ಕೊರಗರಿಗೆ ಹೆಂಚಿದವ ನಾನು. ನನಗೇಕೆ ಏನೂ ಉಪದ್ರವಾಗಲಿಲ್ಲ?

**ನಾರಾಯಣ ತಂತ್ರಿ**—ನಿನ್ನ ದಶಾನಾಥ ಸ್ವಲ್ಪ ಗಟ್ಟಿಯಿದೆ ಈಗ. ಆ ಮಗುವಿನ ದಶೆ ಕೆಟ್ಟದು. ಆದುದರಿಂದಲೇ ನಿಮ್ಮ ಕರ್ಮ ಅದಕ್ಕೆ ತಾಗಿದೆ.

**ಮನೋಹರ**—ಅವನವನ ಕರ್ಮವನ್ನು ಅವನವನೇ ಅನುಭವಿಸ ಬೇಕಲ್ಲವೆ? ಒಬ್ಬನ ಕರ್ಮದ ಫಲ ಇನ್ನೊಬ್ಬನಿಗೆ ತಾಗುವುದುಂಟೇ ತಂತ್ರಿಗಳೇ? ದೇವರ ನ್ಯಾಯವೆಂದರೆ ಇದೇ ರೀತಿಯೇ?

**ನಾರಾಯಣ ತಂತ್ರಿ**—ಒಬ್ಬನ ಕರ್ಮಫಲ ಇಡೀ ಕುಟುಂಬಕ್ಕೆ ಏಕೆ? ತಲತಲಾಂತರಕ್ಕೆ ಬರುತ್ತದೆ. ಅದಕ್ಕೆ ಶ್ಲೋಕಾಧಾರವೇ ಇದೆ. ಆದಂತಿರಲಿ. ಈ ಮನೆದೈವದ ಮನಸ್ಸಂತೋಷವಿಲ್ಲ. ಅದಕ್ಕೆ ಹೇಳಿದ ಹರಕೆ ಸಲಿಸಲಿಲ್ಲ. ಅಲ್ಲದೆ ಅದರ ಸ್ಥಳವೇ ಅಶುದ್ಧವಾಗಿದೆ.

**ತುಂಗಮ್ಮ**—ಹೌದು ತಂತ್ರಿಗಳೇ, ಹೌದು. ನೀವು ಹೇಳಿದುದರಲ್ಲಿ ಒಂದು ಅಕ್ಷರವೂ ಸುಳ್ಳು ಇಲ್ಲ. ನಾನು ಹರಕೆ ಹೇಳಿಕೊಂಡಂತೆ ಕೋಲ ಮಾಡಿಸಲಿಲ್ಲ. ನನ್ನ ಸೊಸೆಯಿದ್ದಾಳಲ್ಲ, ಅವಳು ಇಂಗ್ಲಿಷ್ ಕಲಿತವಳಂತೆ, ಮುಟ್ಟುಗಿಟ್ಟಾದರೂ ಅವಳಿಗೆ ಅದರ ಗಣ್ಯವಿಲ್ಲ. ಅಡಿಗೆಮನೆಯಂತಿಲ್ಲ,

ಭೂತದ ಗುಡಿಯುಂತಿಲ್ಲ; ಎಲ್ಲಿ ವರೆಗೂ ಹೋಗುವುದೆ! ಈ ಕರ್ಮ ಅನುಭವಿಸ ಲಿಕ್ಕೆ ನನ್ನ ಮಗುವಿಗೆ ಬಂದದೆ.

**ನಾರಾಯಣ ತಂತ್ರಿ**—ಪರಹೆಂಗುಸೊಬ್ಬಳಿಂದ ಈ ಮನೆಗೆ ಬಹಳ ಹಾನಿಯುಂಟಾಗುವಂತೆ ತೋರುತ್ತದೆ.

**ತುಂಗಮ್ಮ**—ಇನ್ನು ಉಂಟಾಗುವುದೇನು? ಆಗಿದೆಯಲ್ಲ ಈಗಲೆ!

**ನಾರಾಯಣ ತಂತ್ರಿ**—ಇನ್ನು ಆ ಮಗುವಿಗೊಂದು ಕಠಿಣ ಕಂಟಕ ವುಂಟು. ಅದರ ಪರಿಹಾರಾರ್ಥವಾಗಿ ಚಂಡಿಕಾಹೋಮ ಮಾಡಿಸಬೇಕು. ಆಗ ಮಗುವಿನ ಜೀವಕ್ಕೇನೂ ಅಪಾಯ ಬರಲಿಕ್ಕಿಲ್ಲ, ನಾನಿದ್ದೇನೆ

**ತುಂಗಮ್ಮ**—ಆಯಿತು ತಂತ್ರಿಗಳೆ, ನೀವೇ ಹೋಮ ಮಾಡಿ. ಕುಟುಂಬಕ್ಕೆ ಒಂದೇ ಒಂದಾಗಿರುವ ಮಗುವೊಂದು ಹೇಗಾದರೂ ಬದುಕಲಿ. ಎಷ್ಟು ವೆಚ್ಚವಾದರೂ ಚಿಂತೆ ಇಲ್ಲ

**ಮನೋಹರ**—ತಂತ್ರಿಗಳೇ, ನನ್ನದೊಂದು ಪ್ರಶ್ನೆಯುಂಟು. ಆ ಕುರಿತು ನಿಮ್ಮ ನಿಮಿತ್ತ ನಿಜವಾದರೆ ನಾನು ನಿಮಗೆ ಹತ್ತು ರೂಪಾಯಿ ಕೊಡುವುದು, ಸುಳ್ಳಾದರೆ ನೀವು ಐದು ರೂಪಾಯಿ ಕೊಡುವಿರಾ?

**ನಾರಾಯಣ ತಂತ್ರಿ**—ನನಗೆ ಆ ಪಂಥಗಿಂಥ ಅಗತ್ಯವಿಲ್ಲ. ನನಗೆ ತೋರಿದ ಹಾಗೆ ನಾನು ಹೇಳುತ್ತೇನೆ. ಸುಳ್ಳಾಗಲಿ ಸತ್ಯವಾಗಲಿ ಮೊದಲು ಒಂದು ರೂಪಾಯಿ ಕೊಟ್ಟದ್ದು ಹಿಂದೆ ಸಿಗಲಾರದು

**ಮನೋಹರ** - ಆಯಿತು. ಇಗೊಳ್ಳಿ, ಒಂದು ರೂಪಾಯಿ ತೆಗೆದು ಕೊಳ್ಳಿ. ನಮ್ಮ ಮನೆಯಲ್ಲೊಂದು ಸಾಮಾನು ಹೋಗಿದೆ.

**ನಾರಾಯಣ ತಂತ್ರಿ**—(ಕವಡಿ ಮಗುಚಿ ಬಹಳ ಹೊತ್ತು ಗುಣಿಸಿ) ಹೌದು, ನಿಮ್ಮ ಮನೆಯಿಂದ ಹೋದುದು ಒಬ್ಬ ಹೆಂಗಸಿನ ಆಭರಣ.

**ಮನೋಹರ**—ನಿಜ, ಆಭರಣ. ನಿಮಗೆ ಹೇಗೆ ತಿಳಿಯಿತು?

**ನಾರಾಯಣ ತಂತ್ರಿ**—ಹೇಗೆ ತಿಳಿಯಿತು ಅಂದರೆ? ಮತ್ತೆ ನಾನಿಲ್ಲಿ ಕವಡಿ ಹಿಡಿದು ಗುಣಿಸುವುದೇಕೆ?

**ಮನೋಹರ**—ಆಗಲಿ, ಅದು ಯಾರಿಗೆ ಸಿಕ್ಕಿದೆ?

**ನಾರಾಯಣ ತಂತ್ರಿ**—(ಪುನಹ ಕವಡಿ ಮಗುಚಿ) ಅದನ್ನು ಮನೆ ಯೊಳಗಿನ ಒಂದು ಪ್ರಾಣಿಯೇ ತೆಗೆದಿರುತ್ತದೆ.

**ಮನೋಹರ**– ಪ್ರಾಣಿಯೆಂದರೆ ಎಮ್ಮೆಯೋ, ಕೋಣನೋ? ಸ್ಪಷ್ಟ ಹೇಳಿಬಿಡಿ ತಂತ್ರಿಗಳೇ!

**ನಾರಾಯಣ ತಂತ್ರಿ**—ಸ್ಪಷ್ಟ ಹೇಳಬೇಕೇ? (ಪುನಃ ಕವಡಿ ಮುಗುಚಿ) ತೆಗೆದುದು ಹೆಂಗುಸೆಂತ ತೋರುತ್ತದೆ. ಬಹುಶಃ ಹೆಂಗುಸೇ ಆಗಿರಬೇಕು. (ಮನೋಹರನ ಮುಖ ನೋಡಿ) ಹೌದು, ನಿಶ್ಚಯ ಹೆಂಗುಸು.

**ಮನೋಹರ**—ಈಗ ಅದೆಲ್ಲಿದೆ?

**ನಾರಾಯಣ ತಂತ್ರಿ**—(ಪುನಃ ಕವಡಿ ಗುಣಿಸಿ) ಈಗ ಅದು ಹೆಂಗುಸಿನಿಂದ ಬೇರೆ ಕೈಸೇರಿದೆ.

**ಮನೋಹರ**—ಅದು ಸಿಕ್ಕೀತೋ ಹೇಗೆ?

**ನಾರಾಯಣ ತಂತ್ರಿ**—ಸಂಶಯ. ಆದರೆ ಪ್ರಯತ್ನ ಮಾಡಿದರೆ ಸಿಕ್ಕೀತು ಅದು ಕೈಯಿಂದ ಕೈಗೆ ಹೋಗಿಬಿಟ್ಟಿದೆ. ಸಿಕ್ಕುವುದು ಬಹಳ ಕಷ್ಟ. (ಮನೋಹರನು ಗಹಗಹಿಸಿ ನಗುವನು.)

**ನಾರಾಯಣ ತಂತ್ರಿ**—(ಸಿಟ್ಟಿನಿಂದ) ಏನು ಸುಳ್ಳೇ?

**ಮನೋಹರ**—ಎಲ್ಲಾ ಸುಳ್ಳು.

**ನಾರಾಯಣ ತಂತ್ರಿ**—(ಸಿಟ್ಟಿನಿಂದ ಎದ್ದು) ನೋಡಿ! ಹೊತ್ತು ನೋಡಿ ಹದಿನೈದು ಗಳಿಗೆ ದಾಟಿತು. ವಿಷಗಳಿಗೆ ಬಂದುಹೋಯಿತು. ಮತ್ತೆ ಸುಳ್ಳಾಗದಿರುವುದು ಹೇಗೆ?

**ಮನೋಹರ**—ತಂತ್ರಿಗಳೇ, ನೀವು ಒಳ್ಳೆಯ ತಂತ್ರಗಾರರು. ಆದರೆ ಇಲ್ಲಿ ನಿಮ್ಮ ತಂತ್ರ ನಡೆಯಲಿಲ್ಲ. ನಾನು ಕೇಳಿದ ಪ್ರಶ್ನೆಯೇ ಸುಳ್ಳು. ನನ್ನ ಮನೆಯಲ್ಲಿ ಏನೂ ಹೋಗಲಿಲ್ಲ. ನಿಮ್ಮನ್ನು ಪರೀಕ್ಷಿಸಲೆಂದೇ ಕೇಳಿದೆ. ನೀವು 'ನಾಪಾಸಾಗಿ'ಬಿಟ್ಟಿರಿ.

**ನಾರಾಯಣ ತಂತ್ರಿ**—ರಾಮ ರಾಮ! ಈ ಇಂಗ್ಲಿಷ್ ಕಲಿತವರಿಂದ ಆಗುವುದಿಲ್ಲಪ್ಪ! ನಾನು ತಪ್ಪಿಬೀಳುತ್ತಿದ್ದಿಲ್ಲ. ವಿಷಗಳಿಗೆ ಬಂದುಹೋಯಿತು. ಏನುಮಾಡುವುದು! ತುಂಗಮ್ಮನಿಗೆ ಹೇಳಿದ ಪ್ರಶ್ನೆಯು ಸತ್ಯವಲ್ಲವೇ? ಅದಲ್ಲದೆ ನಾನು ದಿವಸಕ್ಕೆ ನೋಡುವುದು ಒಂದೇ ಪ್ರಶ್ನೆ.

**ತುಂಗಮ್ಮ**—ನಮಗೆ ಹೇಳಿದ್ದು ಎಲ್ಲಾ ಸಮ ತಂತ್ರಿಗಳೇ. ಅವರು ಇಂಗ್ಲಿಷ್ ಕಲಿತವರು. ಏನೂ ಹೇಳುತ್ತಾರೆ; ಏನೂ ಮಾಡುತ್ತಾರೆ.

**ಮನೋಹರ**—ತಂತ್ರಿಗಳೇ, ನಿಮ್ಮ ಈ ತಂತ್ರ ಇನ್ನು ಹೆಚ್ಚು ಸಮಯ ನಡೆಯದು. ನೀವು ಬೇಗನೆ ಈ ವೃತ್ತಿಯನ್ನು ಬಿಟ್ಟು ಬೇರೇನಾದರೂ ವೃತ್ತಿ ಕೈಕೊಳ್ಳುವುದೇ ಲೇಸು. (ಹೋಗುವನು. ಅವನ ಹಿಂದೆಯೇ ತಾರಾನಾಥ ಇಂದಿರೆಯರೂ ಹೋಗುವರು.)

**ನಾರಾಯಣ ತಂ[illegible]**—[illegible]ವನು ಯಾರಪ್ಪ? ವಿಚಿತ್ರ ಪ್ರಾಣಿ! ಈ ಹುಡುಗರಿಗೆಲ್ಲಾ ಯಾವಾಗ ಆ ಇಂಗ್ಲಿಷ್ ವಿದ್ಯೆ ಕಲಿಸತೊಡಗಿದೆವೋ ಆಗಲೆ ನಮ್ಮ ಧರ್ಮ ಕೆಟ್ಟಿದೆ. ನಮ್ಮ ನೀತಿಧರ್ಮ, ವೇದಶಾಸ್ತ್ರವೆಂದರೆ ಅವರಿಗೆ ತಿರಸ್ಕಾರ. ಅದಕ್ಕಾಗಿಯೇ ನಾನು ನನ್ನ ಮಕ್ಕಳನ್ನು ಇಂಗ್ಲಿಷ್ ಶಾಲೆಗೆ ಕಳುಹಿಸದಿದ್ದುದು.

**ತುಂಗಮ್ಮ**—ಹೌದು ತಂತ್ರಿಗಳೇ, ಹೌದು! ನಾವು ಒಬ್ಬನಿಗೆ ಕಲಿಸಿದ್ದು ಸಾಕು. ಒಂದು ಕಾಸಿನ ಪ್ರಯೋಜನವೂ ಇಲ್ಲದೆ ಎರಡು ಮೂರು ಸಾವಿರ ರೂಪಾಯಿ ಖರ್ಚು ಮಾಡಿದೆವು. ಈಗ ಅವನಿಗೆ ದೇವರೆಂದಿಲ್ಲ, ಹಿರಿಯರೆಂದಿಲ್ಲ! ತಾನಾಯಿತು ತನ್ನ ಹೆಂಡತಿಯಾಯಿತು! ಬೇರೆ ಯಾರೂ ಇಲ್ಲ!

**ನಾರಾಯಣ ತಂತ್ರಿ**—ಆಯಿತು. ಈಗ ಹೋಗುತ್ತೇನೆ. ಚಂಡಿಕಾ ಹೋಮಕ್ಕೆ ಸಾಹಿತ್ಯದ ಪಟ್ಟಿಯನ್ನು ಮಾಡಿಕೊಂಡು ನಾಡದು ಬರುತ್ತೇನೆ. ಎಲ್ಲಾ ಚುಟುಕಿನಿಂದ ಮಾಡಿ ತೀರಿಸುವ.

**ಸಂಜೀವ**—ಖರ್ಚಿಗೆ ಎಷ್ಟು ಬೇಕಾದೀತು ಸ್ವಾಮಿ?

**ನಾರಾಯಣ ತಂತ್ರಿ** ಚಂಡಿಕಾ ಹೋಮವಲ್ಲವೆ? ದಕ್ಷಿಣೆ ಮುಖ್ಯ. ಹೆಚ್ಚೆಂದರೆ ಮುನ್ನೂರು ನಾಲ್ನೂರು ರೂಪಾಯಿ ಬೇಕಾದೀತು. ಅಷ್ಟೆ. ಅದಕ್ಕೆಲ್ಲಾ ನಾನು ಪಟ್ಟಿ ಮಾಡುತ್ತೇನೆ. ಪಟ್ಟಿ ಪ್ರಕಾರ ಎಲ್ಲಾ ಸಾಹಿತ್ಯ ಮಾಡಿದರೆ ಸರಿ.

**ತುಂಗಮ್ಮ**—ಆಯಿತು. ತಂತ್ರಿಗಳೇ, ಬಹಳ ಉಪಕಾರವಾಯಿತು.

**ನಾರಾಯಣ ತಂತ್ರಿ**—ಮನೆಯಲ್ಲಿ ಪದಾರ್ಥಕ್ಕೆ ತೆಂಗಿನಕಾಯಿ ಇಲ್ಲವೆಂತ ಅವಳು ಹೇಳುತ್ತಿದ್ದಳು. ಅಂಗಡಿಯಿಂದ ತರಿಸಿವಳೋ ಏನೋ.

**ತುಂಗಮ್ಮ**—ಏಕೆ ಅಂಗಡಿಯಿಂದ ತರಿಸುವುದು? ಪಾಪ. ನಾನು ಕೊಡುತ್ತೇನೆ. ನಾಲ್ಕು ಕಾಯಿ ಕೊಡುವುದು ದೊಡ್ಡದೇ?

**ನಾರಾಯಣ ತಂತ್ರಿ**—ಹಾಗಾದರೆ ನಾಲ್ಕು ಕಾಯಿ, ಅದರೊಂದಿಗೆ ಸೌತೆಕಾಯಿ ಏನಾದರೂ ಇದ್ದರೆ ಕಡೆಗೆ ನಿಮ್ಮ ಕೆಲಸದವನ ಹತ್ತಿರ ಮನೆಗೆ ಕಳುಹಿಸಿಬಿಡು. ನನಗೆ ಇನ್ನೊಂದು ಕಡೆಗೆ ಹೋಗಬೇಕಾಗಿದೆ.

(ಹೋಗುವನು.)

---

## ೯ನೇ ದೃಶ್ಯ

[ಒಂದು ಕೋಣೆಯಲ್ಲಿ ತುಂಗಮ್ಮ, ಮನೋರಮೆ ಮತ್ತು ಸಂಜೀವ ಇವರು ಕುಳಿತು ಮಾತನಾಡುತ್ತಿರುವರು.]

**ತುಂಗಮ್ಮ**—ಸಂಜೀವ, ಕೋಲದ ಕೆಲಸಗಳನ್ನೆಲ್ಲಾ ನೀನೇ ಮಾಡಿಸಬೇಕು. ತಾರಾನಾಥನನ್ನು ನಂಬಿಕೊಂಡಿದ್ದರಾಗದು. ಅವನ ಸಂಗತಿ ನಿನಗೆ ತಿಳಿಯಿತಲ್ಲ, ತಂತ್ರಿಗಳಿಗೆ ಕೊಡಲು ಒಂದು ರೂಪಾಯಿ ಕೂಡ ಅವನ ಕೈಯಲ್ಲಿಲ್ಲವಂತೆ! ಹೆಂಡತಿಗೆ ಸೀರೆ, ಕುಪ್ಪಸ, ಚಿನ್ನ ಮಾಡಿಸಲಿಕ್ಕಾದರೆ ಅವನಲ್ಲಿ ಬೇಕಾದಷ್ಟು ಹಣವಿದೆ. ಸಂಜೀವ, ನೀನಿದನ್ನು ನಂಬಲಿಕ್ಕಿಲ್ಲ. ಬರೇ ಸಾಬೂನಿಗಾಗಿ ಅವಳಿಗೆ ತಿಂಗಳಿಗೆ ಒಂದೆರಡು ರೂಪಾಯಿ ಬೇಕಾಗುತ್ತದೆ ನೋಡು!

**ಸಂಜೀವ**—ಕೋಲದ ವಿಷಯದಲ್ಲಿ ನಿಮಗೆ ಯಾವ ಭಯವೂ ಬೇಡ. ಎಲ್ಲಾ ನಾನು ಮಾಡಿಸುತ್ತೇನೆ. ತಾರಾನಾಥನು ನನ್ನ ಮನೆಗೆ ಬಂದವನು ಸಿಕ್ಕಿದವರ ಮಾತು ಕೇಳಿ ನನಗೇನೇ ಬುದ್ಧಿ ಹೇಳಲಿಕ್ಕೆ ಹೊರಟಿದ್ದಾನೆ. ಅವನಿಂದ ಒಂದು ಕಾಸಿನ ಕೆಲಸ ಆಗುವುದಿಲ್ಲವಾದರೂ ಪರೋಪದೇಶ ಪಾಂಡಿತ್ಯಕ್ಕೆ ಏನೂ ಕಡಿಮೆಯಿಲ್ಲ

**ಮನೋರಮೆ**—ಇದಕ್ಕೆ ಅವನು ಕಾರಣನಲ್ಲ; ಅವನ ಹೆಂಡತಿ. ಅವಳೊಬ್ಬಳು ರಾಣಿ! ತನಗಿಂತ ಮೇಲೆ ಯಾರೂ ಇಲ್ಲವೆಂದು ಭಾವಿಸಿಕೊಂಡಿದ್ದಾಳೆ. ಅವಳ ಮಾತೇನು! 'ಮರ್ಜಿ'ಯೇನು!

**ತುಂಗಮ್ಮ**—'ಮರ್ಜಿ'ಯೆಲ್ಲಾ 'ಮದ್ದುಮ'ರದೆ. ಅವಳಿಂದಲೇ ನನ್ನ ಮಗ ಕೆಟ್ಟುಹೋದುದು. ಅವಳು ಬರುವ ಮೊದಲು ನನ್ನ ಮಾತನ್ನು ಕಡ್ಡಿ ಮೀರದ ಅವನಿಗೆ ಈಗ ನಾನೆಂದರೆ ಒಂದು ಕಸದ ಕಡ್ಡಿ. ಅವಳನ್ನು ಹೇಗಾ

ದರೂ ಹೊರಡಿಸದಿದ್ದರೆ ತಂತ್ರಿಗಳು ಹೇಳಿದ ಹಾಗೆ ನಮ್ಮ ಮನೆ ಒಳ್ಳೇದಾಗದು. ನಮಗೆ ರೋಗ ತಪ್ಪದು. ನನ್ನ ಮಗನ ಬುದ್ಧಿ ಸರಿ ನಿಲ್ಲದು. ಸಂಜೀವ, ಏನಾದರೊಂದು ಉಪಾಯ ಮಾಡಿ, ಆ ಮಾರಿಯನ್ನೊಮ್ಮೆ ಮನೆಯಿಂದ ಹೊರಡಿಸು. ಸಾಕುಸಾಕಾಯಿತು ನನಗವಳ ಕಾಟ! ನಾನು ಇದ್ದೂ ಸತ್ತ ಹಾಗೆ ಈ ಮನೆಯಲ್ಲಿ.

**ಮನೋರಮೆ**—ಅವಳದೇ ಸಂಭ್ರಮ ಅವಳಿಗೆ. ನಾನು ಎಲ್ಲಿಯಾದರೂ ಅಪರೂಪದಲ್ಲಿ ಒಮ್ಮೆ ಬಂದರೆ ನನ್ನನ್ನು ಗಣಿಸಲಿಕ್ಕಿಲ್ಲ. ಯಾವಾಗಲೂ ಇರುವುದು ಉಪ್ಪರಿಗೆಯಲ್ಲಿ. ಯಾರು ಇದ್ದಾರೆಂದಿಲ್ಲ, ಇಲ್ಲವೆಂದಿಲ್ಲ. ಇಡೀ ದಿವಸ ಅಣ್ಣನೊಡನೆ, ಆ ಮನೋಹರನೊಡನೆ ಮಾತನಾಡುತ್ತಿರುವುದು.

**ಸಂಜೀವ**—ಇಂದಿರೆಯನ್ನು ಮನೆಯಿಂದ ಹೊರಡಿಸುವುದು ಒಂದು ದೊಡ್ಡ ಕೆಲಸವಲ್ಲ. ನೀವು ಮಾತ್ರ ನಾನು ಹೇಳಿದ ಹಾಗೆ ಕೇಳಬೇಕು.

**ತುಂಗಮ್ಮ**—ನೀನು ಹೇಳಿದ ಹಾಗೆ ಕೇಳದಿದ್ದರೆ ಮತ್ತಾರು ಹೇಳಿದ ಹಾಗೆ ಕೇಳುವುದು? ನೀನು ಒಬ್ಬನು ಅಲ್ಲದಿದ್ದರೆ ನಮ್ಮ ಗತಿಯೇನಾಗುತ್ತಿತ್ತೋ! ಮನೋರಮೆಯನ್ನು ತಾರಾನಾಥನ ಮಾತಿನಂತೆ ಮನೋಹರನಿಗೆ ಮದುವೆ ಮಾಡಿಬಿಡುತ್ತಿದ್ದರೆ ಎಲ್ಲವೂ ಅವನ ಇಚ್ಛೆಯಂತೆಯೇ ನಡೆಯುತ್ತಿದ್ದಿತು ಈಗ ನೀನಾದರೊಬ್ಬ ತಡೆಯಾಗಿರುವಿ.

**ಸಂಜೀವ**—ನಿಮಗೆ ಮನಸ್ಸಿದ್ದರೆ ಅವನನ್ನು ಒಂದು ಕ್ಷಣದಲ್ಲಿ 'ದೇಹಿ ದೇಹಿ' ಎನ್ನಿಸಬಹುದು. ಪಟ್ಟೆ ಇರುವುದು ನಿಮ್ಮ ಹೆಸರಲ್ಲಿ ಅಲ್ಲವೆ? ಅವನಿಗೆ ಏನು ಅಧಿಕಾರವುಂಟು? ನೀವು ಹೇಳಿದಂತೆ ಕೇಳಬೇಕು ಅವ.

**ತುಂಗಮ್ಮ**—ಅವನೇನೂ ಕೆಟ್ಟವನಲ್ಲ. ಎಲ್ಲಕ್ಕೂ ಕಾರಣ ಅವನ ಹೆಂಡತಿ—ಆ ತಾಟಕಿ.

**ಸಂಜೀವ**—ತಾರಾನಾಥನು ಇಂದಿರೆಯನ್ನು ಬಿಟ್ಟ ಮೇಲೆ ಅವನಿಗೆ ಎರಡನೇ ಮದುವೆಯಾಗಬೇಕು. ಐದು ಸಾವಿರ ರೂಪಾಯಿ ವರದಕ್ಷಿಣೆ ಸಮೇತ ಹುಡುಗಿ ಕೊಡಿಸುವುದು ನನಗೆ ಸಂದಿತು.

**ತುಂಗಮ್ಮ**—ಆಯಿತು. ಒಮ್ಮೆ ಈ ಮಾರಿಯನ್ನು ಮನೆಯಿಂದ ಹೊರಡಿಸು. ಮತ್ತೆ ನೀನು ಹೇಳಿದ ಹಾಗೆ ಮಾಡುವ.

---

# ೧೦ನೇ ದೃಶ್ಯ

[ತಾರಾನಾಥ, ಮನೋಹರ, ಇಂದಿರೆ ಇವರು ಕದ್ರೆಯ ಕಡೆ ತಿರುಗಾಡಹೋಗಿ ಒಂದೆಡೆ ಕುಳಿತು ಗಾಳಿ ತೆಗೆದುಕೊಳ್ಳುತ್ತಿರುವರು.]

**ತಾರಾನಾಥ**—ಮಿತ್ರ, ನನಗೇಕೋ ಹೀಗೆ ಇಂದಿರೆಯೊಂದಿಗೆ ತಿರುಗಾಡ ಹೋಗುವುದೆಂದರೆ ಈಗೀಗ ಉತ್ಸಾಹವಿಲ್ಲ. ಮನೆಯಲ್ಲಿ ಏನೇನೋ ಹೇಳುತ್ತಾರೆ.

**ಮನೋಹರ**—ನೀನೊಬ್ಬ! ಯಾವಾಗಲೂ ಮನೆಯವರು ಹಾಗೆ ಹೇಳುತ್ತಾರೆ; ಊರವರು ಹೀಗೆ ಹೇಳುತ್ತಾರೆ ಎನ್ನುತ್ತಿರುವೆ ನಾವು ಮನೆಯವರಿಗಾಗಿ ಅಥವಾ ಊರವರಿಗಾಗಿ ಮದುವೆ ಮಾಡಿಕೊಂಡಿರುವುದೋ? ನಮ್ಮ ಸುಖಕ್ಕಾಗಿಯೋ? ನಮ್ಮ ಹೆಂಡಿರೊಡನೆಯೂ ನಮಗೆ ಬೇಕಾದಂತೆ ತಿರುಗಾಡುವ ಸ್ವಾತಂತ್ರ್ಯವಿಲ್ಲವೆ?

**ಇಂದಿರೆ**—ಹೌದು, ಸ್ವಾತಂತ್ರ್ಯ! ಅದೆಲ್ಲಾ ದೊಡ್ಡ 'ಲೆಕ್ಚರು' ಕೊಡಲಿಕ್ಕೆ, ಲೇಖನ ಬರಿಯಲಿಕ್ಕೆ!

**ಮನೋಹರ**—ಹೌದು, ತಾರಾನಾಥ! ಆ ಚಂಡಿಕಾಹೋಮ, ಕೋಲಗಳನ್ನೆಲ್ಲಾ ಮಾಡಿಸಲಿಕ್ಕೆ ಬಿಟ್ಟೆಯಲ್ಲ, ಯಾಕೆ? ಸ್ವಲ್ಪ ನಿರ್ಧಾರದಿಂದ ನಿರ್ದಾಕ್ಷಿಣ್ಯವಾಗಿ ವರ್ತಿಸದಿದ್ದರೆ ಯಾವ ಕಾರ್ಯವೂ ಸಾಧ್ಯವಾಗದು.

**ತಾರಾನಾಥ**—ಮನೋಹರ, ನಾನೇನು ಮಾಡಲಿ? ನಾನು ಬೇಡವೆಂದರೂ ಕೆಲಸವೆಲ್ಲಾ ನಡೆದೇ ಹೋಗುತ್ತದೆ. ಆ [illegible]ವನು ನನ್ನನ್ನು ಲಕ್ಷಿಸದೆ ಎಲ್ಲವನ್ನೂ ಮಾಡಿಸಿಬಿಡುತ್ತಾನೆ. ಅವನು ಎಷ್ಟೆಷ್ಟು ಪೂಜೆಪುರಸ್ಕಾರಗಳನ್ನು ಮಾಡಿಸುತ್ತಾ ಬರುತ್ತಾನೋ ಅಷ್ಟಷ್ಟು ದುಷ್ಕೃತ್ಯಗಳನ್ನೂ ಹೆಚ್ಚಿಸುತ್ತಾನೆ. ಯಾವ ಕೃತ್ಯ ಮಾಡಿದರೂ ಚಿಂತೆ ಇಲ್ಲವಂತೆ ಪುಣ್ಯವೊಂದು ಸಂಪಾದಿಸಿದರೆ ಸರಿಯಂತೆ!

**ಮನೋಹರ**—ತಾರಾನಾಥ, ಈ ಪುಣ್ಯಸಂಪಾದನೆಯ ಅರ್ಥವೇನೋ ತಿಳಿಯದು! ಈ ಜಡಮೂಢ ಮನೋವೃತ್ತಿಯ ಘನರೋಗ ಕೀಟವೇ ನಮ್ಮ ಸಮಾಜದ ಹೃದಯವನ್ನು ತಿನ್ನುತ್ತಿರುವುದು. ನಮ್ಮ ಜನರು ಕಣ್ಮುಚ್ಚಿ

ಕೊಂಡು ನೂರಾರು ವರ್ಷ ಪೂರ್ವದ ಆಚಾರವಿಚಾರಗಳಿಗೆ ಇನ್ನೂ ಕಟ್ಟುಬಿದ್ದು ಗಾಣದೆತ್ತಿನಂತೆ ಸುತ್ತುತ್ತಿರುವರು.

**ತಾರಾನಾಥ**—ಮನೋಹರ, ನೀನು ಹೇಳಿದ ಮಾತು ಅಕ್ಷರಶಃ ನಿಜ. ಪ್ರತ್ಯಕ್ಷ ಪ್ರಮಾಣಕ್ಕಿಂತಲೂ ಶಬ್ದ ಪ್ರಮಾಣಕ್ಕೆ ನಮ್ಮ ಜನರು ಲಕ್ಷ್ಯ ಕೊಡುವುದೇ ಹೆಚ್ಚು. ತಮ್ಮ ಪ್ರತ್ಯಕ್ಷ ಅನುಭವವನ್ನಾದರೂ ಅಲ್ಲಗಳೆಯು ವರೇ ಹೊರತು ವೇದಶಾಸ್ತ್ರಗಳಲ್ಲಿ ಹೇಳಿದುದು ಸುಳ್ಳೆಂದು ನಂಬರು ಪೂರ್ವದ ಆಚಾರ ವಿಚಾರಗಳೆಂಬ ಪ್ರೇತಬಾಧೆಯಿಂದ ನಮ್ಮ ಸಮಾಜವು ದಿನೇ ದಿನೇ ಅಧಃಪತನ ಹೊಂದುತ್ತಿರುವುದು.

**ಇಂದಿರೆ**—ಕತ್ತಲಾಗುತ್ತ ಬಂತು, ತಿಂಗಳ ಬೆಳಕು ಸಹ ಇಲ್ಲ. ಹೋಗುವ.

**ತಾರಾನಾಥ**—ಹೌದು, ತಡವಾಯಿತು ಹೋಗುವ.

(ಎಲ್ಲರೂ ಹೋಗುವರು.)

---

## ೧೧ನೇ ದೃಶ್ಯ.

[ತುಂಗಮ್ಮನ ಮನೆ ತಾರಾನಾಥನನ್ನು ಒಂದೆಡೆ ಕರೆದು ತುಂಗಮ್ಮನೂ, ಮನೋರಮೆಯೂ ರಹಸ್ಯವಾಗಿ ಮಾತಾಡುವರು.]

**ತುಂಗಮ್ಮ**—ನಿನ್ನ ಇಂದಿರೆಯು ನಿನಗೆ ಮಹಾಪತಿವ್ರತೆ! ಸೀತಾ ಸ್ವರೂಪೆ! ಆದರೆ........

**ತಾರಾನಾಥ** — ಆದರೇನು?

**ಮನೋರಮೆ**—ಆದರೆ ಏನು! ಕಲಿತ ಹುಡುಗಿಯರ ಕಥೆಯು ಅಷ್ಟಷ್ಟೆ.

**ತಾರಾನಾಥ** – ಏನು ಅಷ್ಟಷ್ಟೆ?

**ಮನೋರಮೆ**—ಅದನ್ನು ಹೇಳಿ ನಾವೇಕೆ ನಿಷ್ಠುರ ಮಾಡಿಕೊಳ್ಳ ಬೇಕು? ಇಂದಿರೆಯು ನಿನ್ನ ಪರಮಪ್ರಿಯೆ! ಮನೋಹರನು ನಿನ್ನ ಪರಮಾಪ್ತ! ಅಹಹ! ಎಲ್ಲಿ ಸಿಕ್ಕಿತೋ ನಿನಗೆ ಈ ಜತೆ! ಎಲ್ಲಕ್ಕೂ ಕಣ್ಮುಚ್ಚಿಕೊಂಡಿದ್ದರೆ ಏನೂ ಇಲ್ಲ!

**ತಾರಾನಾಥ**—ತಂಗೀ, ಸುಮ್ಮನೆ ಏನೇನೋ ಮನಸ್ಸಿನಲ್ಲಿಟ್ಟುಕೊಂಡು ಸಿಕ್ಕಸಿಕ್ಕವರನ್ನು ದೂರಬೇಡ. ಇದ್ದುದನ್ನು ಇದ್ದ ಹಾಗೆ ಹೇಳು.

**ತುಂಗಮ್ಮ**—ನಾವು ಏನು ಹೇಳಿದರೂ ದೂರು ಎಂದಾಗುವುದು. ಅದರಲ್ಲಿ ನಿನಗೆ ವಿಶ್ವಾಸವುಂಟಾಗಲಾರದು.

**ತಾರಾನಾಥ**—ಸತ್ಯಸಂಗತಿ ಹೇಳಿದರೆ ಯಾರಿಗೂ ವಿಶ್ವಾಸವುಂಟಾಗುತ್ತದೆ.

**ಮನೋರಮೆ**—ಹಾಗಾದರೆ ಸತ್ಯಸಂಗತಿ ಹೇಳಲೆ?

**ತಾರಾನಾಥ**—ಅವಶ್ಯವಾಗಿ ಹೇಳಬೇಕು.

**ಮನೋರಮೆ**—ಇಂದಿರೆಗೂ ಮನೋಹರನಿಗೂ........

**ತಾರಾನಾಥ**—ಏನು? ಪೂರ್ಣ ಹೇಳು.

**ಮನೋರಮೆ**—ಅವರಿಗೆ ಸ್ನೇಹಾಚಾರವಿದೆಯಂತೆ!

**ತಾರಾನಾಥ**—ಯಾರು ಹೇಳುವುದು?

**ಮನೋರಮೆ**—ಹೇಳುವುದಾರು! ಊರಲ್ಲೆಲ್ಲಾ ಸುದ್ದಿ ಹಬ್ಬಿರುವುದು. ನಿನ್ನ ಕೆಲಸದ ಹುಡುಗನನ್ನೇ ಕೇಳು. ಅವನಿಗೆ ಇಂದಿರೆಯೆಂದರೆ ಪ್ರಾಣ. ಅವನೇನೂ ಸುಳ್ಳು ಹೇಳಲಾರನಷ್ಟೆ.

**ತಾರಾನಾಥ**--ನೀವಿಬ್ಬರೂ ಹೊರಗೆ ಹೋಗಿ. ಅಮ್ಮಾ, ಆ ಹುಡುಗನನ್ನು ಇಲ್ಲಿಗೆ ಕಳುಹಿಸು. (ತಲೆಗೆ ಕೈ ಹಿಡಿದು ಅತ್ಯಂತ ಖೇದಗೊಂಡು ಕುಳಿತಿರುವನು. ಆಗ ಹೆದರಿಹೆದರಿಕೊಂಡು ಇಂದಿರೆಯ ಪ್ರೀತಿಯ ಸೇವಕನಾದ ಹುಡುಗ ಪ್ರಾಯದ ಸೋಮನು ಬರುವನು. ತಾರಾನಾಥನು ಅವನನ್ನು ಕಂಡೊಡನೆಯೇ ಜಗ್ಗನೆದ್ದು ದಿಟ್ಟಿಸಿ) ಸೋಮು, ಸತ್ಯ ಹೇಳು. ನಿನ್ನ ಮಾತನ್ನು ನಂಬುವೆನು. ನಾನು ಸಂಜೀವನ ಮನೆಗೆ ಹೋಗಿದ್ದಾಗ ಇಲ್ಲಿ ನಡೆದ ಸಮಾಚಾರವನ್ನು ಹೇಳು. ಹೆದರಬೇಡ, ನಾನಿದ್ದೇನೆ

**ಸೋಮು**—ಏನೂ ಇಲ್ಲ ಸ್ವಾಮಿ. ಅದು ಚಾಕರಿಯ ನನಗೆ ಏಕೆ? ಕಡೆಗೆ ನೀವು ಎಲ್ಲಾ ಒಂದೇ.

**ತಾರಾನಾಥ**—ಇದ್ದುದನ್ನು ಇದ್ದ ಹಾಗೆ ಬೇಗ ಹೇಳುವೆಯೋ? ಇಲ್ಲವೋ?

**ಸೋಮು**—ಯಾವ ವಿಷಯವನ್ನು ಸ್ವಾಮಿ?

**ತಾರಾನಾಥ**—ಯಾವ ವಿಷಯವೆಂಬುದು ನಿನಗೆ ಗೊತ್ತೇ ಇಲ್ಲವೇ? ನೀಚಾ, ನಾನು ಭಾವನ ಮನೆಗೆ ಹೋಗಿದ್ದಾಗ ಇಂದಿರೆಯು ಏನು ಮಾಡುತ್ತಿದ್ದಳೆಂಬುದನ್ನು ಹೇಳು.

**ಸೋಮು**—ಏನೂ ಇಲ್ಲ ಸ್ವಾಮಿ.

**ತಾರಾನಾಥ**—ಏನೂ ಇಲ್ಲ! ನೀನು ಇಂದೇ ಮನೆಯಿಂದ ಹೊರಡಬೇಕು. ನಡೆ.

**ಸೋಮು**—ಇಂದಿರಮ್ಮನವರು ಒಳ್ಳೇಯವರು ಸ್ವಾಮಿ. ದಯಾಳು.

**ತಾರಾನಾಥ**—ಒಳ್ಳೆಯವಳಾಗಲಿ ಕೆಟ್ಟವಳಾಗಲಿ. ಆ ವಿಚಾರ ನಿನಗೆ ಬೇಡ. ನಡೆದ ಸಂಗತಿಗಳನ್ನೆಲ್ಲಾ ಹೇಳು. ಇಲ್ಲವಾದರೆ ಇಲ್ಲಿಂದ ತೊಲಗು.

**ಸೋಮು**—ಒಂದು ದಿನ ಮನೋಹರರ ಸೇವಕ ಒಂದು ಕಾಗದವನ್ನು ತಂದ ಸ್ವಾಮಿ. ಇಂದಿರಮ್ಮನವರು ಅವನನ್ನು ಉಪ್ಪರಿಗೆಗೆ ಕರೆದುಕೊಂಡು ಹೋಗಿ ಪದ್ಯ ಹೇಳಿಸಿ ಏನೋ ಬರೆದುಕೊಟ್ಟರು.

**ತಾರಾನಾಥ**—ಅಷ್ಟೆಯೋ? ಮತ್ತೇನಾದರೂ ಇದೆಯೋ?

**ಸೋಮು**—ಆ ದಿನ ಸಂಜೆಯೇ ಮನೋಹರರು ಬಂದರು. ಉಪ್ಪರಿಗೆಯಲ್ಲಿ ಅವರಿಬ್ಬರೂ ಏನೇನೋ ಮಾತಾಡುತ್ತಿದ್ದರು

**ತಾರಾನಾಥ**—(ಕ್ರುದ್ಧನಾಗಿ) ಇದು ನಿಜವೇ? ಹ! ಮಿತ್ರದ್ರೋಹೀ!

**ಸೋಮು**—ಹೌದು ಸ್ವಾಮಿ. ತಂದೆಯಾಣೆ ನಿಜ. ತಿರುಪತಿ ದೇವರ ಪಾದದಾಣೆ ಸತ್ಯ.

**ತಾರಾನಾಥ**—ಆಗಲಿ ಹೋಗು. (**ದುಃಖ ಕ್ರೋಧಾತಿಶಯದಿಂದ ಅತ್ತಿತ್ತ ಹುಚ್ಚನಂತೆ ತಿರುಗುವನು.**)

[**ಇಂದಿರೆಯು ಪ್ರವೇಶಿಸುವಳು.**]

**ಇಂದಿರೆ**—ಪ್ರಿಯ, ಮನೋಹರರು ಬಂದು, ಹೆಬ್ಬಾಗಿಲಲ್ಲಿ ನಿಮ್ಮನ್ನು ಕಾಯುತ್ತಿರುವರು.

**ತಾರಾನಾಥ**—ಅವನನ್ನು ಉಪ್ಪರಿಗೆಗೆ ಕರೆದುಕೊಂಡು ಹೋಗು.

**ಇಂದಿರೆ**—ಅಂದರೆ!

**ತಾರಾನಾಥ** ಅಂದರೆ ಅದೇ. ನಡೆ! ನನಗೆ ಇಂದು ಅವನನ್ನು ನೋಡಲಿಕ್ಕೆ ಸಾಧ್ಯವಿಲ್ಲ. ಸೌಖ್ಯವೂ ಇಲ್ಲ.

**ಇಂದಿರೆ**—ಏನು, ತಲೆಸಿಡಿತವೆ? ನೀಲಗಿರಿ ತೈಲ ತರಲೇ?

**ತಾರಾನಾಥ**—ಏನೂ ಬೇಡ. ನಿನ್ನ ಕೆಲಸ ನೋಡು.

**ಇಂದಿರೆ**—ಅಲ್ಲಿ ಅವರು ಆವಾಗಿನಿಂದ ಕಾದುಕುಳಿತಿರುವರಲ್ಲ!

**ತಾರಾನಾಥ**—ನೀನು ಹೋಗಿ ಮಾತನಾಡು!

**ಇಂದಿರೆ**—ಅವರು ಆತುರಪಡುತ್ತಿರುವುದು ನಿಮ್ಮೊಡನೆ ಮಾತನಾಡಲು, ನನ್ನೊಡನೆ ಅಲ್ಲ.

**ತಾರಾನಾಥ**—ಅಹ! ನಿನ್ನೊಡನೆ ಅಲ್ಲವೇ? ನನ್ನೊಡನೆಯೇ? ಹೋಗು, ನನಗೆ ಈ ದಿನ ಸೌಖ್ಯವಿಲ್ಲವೆಂಸು ಹೇಳು. ಅವನು ಹೋಗಲಿ. (ಇಂದಿರೆಯು ಹೋಗುವಳು ಅನಂತರ ಮನೋಹರನೂ ಆವಳೂ ಒಳಗೆ ಬರುವರು)

**ಮನೋಹರ**—ಏನು! ಏನಿದು ತಾರಾನಾಥ! ತಲೆಸಿಡಿತವೇ? (ಹಣೆ ಮುಟ್ಟಿ) ಜ್ವರಗಿರ ಇಲ್ಲ. ಬರೀ ತಲೆಸಿಡಿತವೆಂದು ಕಾಣುತ್ತದೆ. ನೀಲಗಿರಿಯಾಗಲಿ, ಅಮೃತಾಂಜನವಾಗಲಿ ಇಲ್ಲವೇ?

**ಇಂದಿರೆ**—ಇದೆ, ತರಲೆ?

**ತಾರಾನಾಥ**—ಏನೂ ಬೇಡ. ಮನೋಹರ, ನೀನು ಹೋಗು. ನನಗೆ ನಿನ್ನೊಡನೆ ಮಾತಾಡುವ ಮನಸ್ಸಿಲ್ಲ.

**ಮನೋಹರ**— ಅಂದರೆ!

**ಇಂದಿರೆ**—ಅಣ್ಣಾ, ಅವರ ಇಂದಿನ ರೀತಿಯೇ ಬೇರೆ. ನನ್ನೊಡನೆಯೂ ಹೀಗೆಯೇ ಮಾತನಾಡಿದರು ಸಿಟ್ಟಾಗಬೇಡಿರಿ.

**ಮನೋಹರ**— ಇದು ಏನು ತಾರಾನಾಥ? ನಿನಗೆ ಏನಾಗಿರುವುದು?

**ತಾರಾನಾಥ**—ನನಗೆ ಏನೂ ಆಗಿರುವುದಿಲ್ಲ. ಸೌಖ್ಯವಾಗಿರುವೆನು. ನಿನಗೆ ಅದರ ಗೊಡವೆ ಬೇಡ. ನೀನಿಲ್ಲಿಂದ ಹೋಗಬಹುದು.

**ಮನೋಹರ**— ಆಗಬಹುದು. ಹೋಗುವೆನು. ಇಂದಿರೆ, ಅವನ ಇಂದಿನ ವರ್ತನೆಯು ವಿಚಿತ್ರವಾಗಿರುವುದು. ಅವನ ಮನಸ್ಸಿನಲ್ಲಿ ಏನೋ ವ್ಯಥೆಯುಂಟಾಗಿರುವುದು. ಈಗ ನಾನು ಹೋಗುವೆನು. ಇನ್ನೊಮ್ಮೆ ಬರುವೆನು. (ಹೋಗುವನು)

**ಇಂದಿರೆ**—(ತಾರಾನಾಥನ ತಲೆಸವರಿ) ಪ್ರಾಣೇಶ, ಏನು? ಏನಾಯಿತು ನಿಮಗೆ? ನಿಜವಾಗಿಯೂ ತಲೆಸಿಡಿತವೆ?

**ತಾರಾನಾಥ** ಅಲ್ಲ, ನಟನೆ! (ದೂಡಿ) ದೂರ ಸರಿ—ನನ್ನ ಮೈ ಮುಟ್ಟಬೇಡ.

**ಇಂದಿರೆ**—ಆಯಿತು. ನನ್ನ ಸಾಮಿಪ್ಯವೂ ನಿಮಗೆ ಅಸಹನೀಯ ವಾದರೆ ನಾನು ಇಲ್ಲಿಂದ ಹೋಗುವೆನು. (ಹೋಗುವಳು.)

**ತಾರಾನಾಥ**—(ತುಸುಹೊತ್ತು ಅತ್ತಿತ್ತ ತಿರುಗಿ) ಅಹ! ಅಂತರಾಳದೊಳಗೆ ಇಂತಹ ವಿಷಕೀಟವು ಹುದುಗಿರುವ ಕಮಲ ಪುಷ್ಪವು ಇಷ್ಟೊಂದು ಸೊಬಗು, ಸೊಂಪಿನ ಮನೋಹರತೆ ಬೀರಲು ಸಾಧ್ಯವೇ? ಅಮೃತ ಪಾತ್ರದ ತಳದಲ್ಲಿ ವಿಷದ ಪದರು ಅಡಗಿರುವುದೇ? ವಸಂತ ಮಂದಾನಿಲವು ವಿಷವಾಯು ಸಮ್ಮಿಳಿತವಾಗಿರುವುದೇ? ಇದು ನಿಜವಾಗಿರಬಹುದೇ? ಸೋಮನು ಸುಳ್ಳು ಹೇಳಿರಬಹುದೆ? ಛೆ! ಅವನನ್ನು ಸರಿಯಾಗಿ ವಿಚಾರಿಸದೇನೇ ಕಳುಹಿಸಿಬಿಟ್ಟೆನು. ಇನ್ನೊಮ್ಮೆ ವಿಚಾರಿಸಿ ಸಂಗತಿಯನ್ನೆಲ್ಲಾ ವಿವರವಾಗಿ ತಿಳಿದುಕೊಳ್ಳಲೇಬೇಕು.

---

# ೧೨ನೇ ದೃಶ್ಯ

[ತಾರಾನಾಥನು ಏಕಾಕಿಯಾಗಿ ತನ್ನ ಕೋಣೆಯೊಳಗೆ ಕುಳಿತು ಚಿಂತಾಮಗ್ನ ನಾಗಿರುವನು.]

**ತಾರಾನಾಥ**—ಇಂತಹ ವಿಶ್ವಾಸಘಾತುಕವೂ ಇದೆಯೇ? ಮನೋ ಹರನು ಈ ರೀತಿ ಮಿತ್ರದ್ರೋಹ ಮಾಡುವ ಘಾತಕಿಯೇ? ಇಂದಿರೆಯೂ ಇಂತಹ ವಂಚಕ ಪಾತಕಿಯೇ? ಅವಳ ಪ್ರೀತಿಯ ಸೇವಕ ಸೋಮನು ಹೇಳಿದುದು ಸುಳ್ಳೇ? (ತುಸು ಯೋಚಿಸಿ) ಅಹ! ನಿಶ್ಚಯ, ನಿಶ್ಚಯ. ಈ ಲೋಕ ದಲ್ಲಿ ಯಾರನ್ನೂ ನಂಬಬಾರದೆಂಬುದು ನಿಶ್ಚಯ. ಮನೋಹರ, ಈಗ ನಿನ್ನ ಮತ್ತು ಇಂದಿರೆಯ ಸಂಘ್ಯಾಟನದ, ಸರಸಸಲ್ಲಾಪದ ಆಂತರ್ಯವು ತಿಳಿಯಿತು. ನೀನೂ ಮನೋಹರನೂ ಪರಸ್ಪರ ಮೆಚ್ಚುಗೆಯಿಂದ ಹಾಡುವ ಬಗೆಯೂ ಬಯಲಾಯಿತು. ಮೈತ್ರಿಯ ಮಂತ್ರಜಾಲ ಬೀರಿದ ಮಾಂತ್ರಿಕನ ಕುಹಕ ತನವನ್ನು ಅರಿತುಕೊಳ್ಳದ ನಾನು ಎಂಥಾ ಮೊದ್ದು ಜಂತು! (ತಲೆಬಾಗಿ ಆಲೋಚನಾಪರನಾಗುವನು. ಆಗ ಇಂದಿರೆಯು ಪ್ರವೇಶಿಸುವಳು.)

**ಇಂದಿರೆ**—ಏನಿದು ಪ್ರಿಯ? ನಿಮ್ಮ ಮನೋಸ್ಥಿತಿಯು ಈ ರೀತಿ ಮಾರ್ಪಡಲು ಕಾರಣವೇನು? ನನ್ನಿಂದ ಏನಾದರೂ ಅಪರಾಧವಾಯಿತೆ? ಹೇಳಿ, ಮನಬಿಚ್ಚಿ ಹೇಳಿ.

**ತಾರಾನಾಥ**—ನಿನ್ನೊಡನೆ ಮನಬಿಚ್ಚಿ ಹೇಳುವುದೆ? ಏನನ್ನು? ನೀನು ಅತ್ಯಂತ ನಿರ್ಮಲೆ! ನಿರ್ದೋಷಿ! ನಿಷ್ಕಪಟಿ!

**ಇಂದಿರೆ**—ಅಹ! ಪ್ರಿಯ, ಈ ವ್ಯಂಗ್ಯೋಕ್ತಿಯ ಕೂರಲಗಿನಿಂದ ನನ್ನ ಹೃದಯವನ್ನು ಏಕೆ ಇರಿಯುತ್ತಿರುವಿರಿ? ನನ್ನಲ್ಲಿರುವ ದೋಷವೇನು? ನಾನು ಮಾಡಿದ ಅಪರಾಧವನ್ನಾದರೂ ಹೇಳಬಾರದೆ?

**ತಾರಾನಾಥ**—ನಿನ್ನಲ್ಲಿ ಯಾವ ದೋಷವೂ ಇಲ್ಲ! ದೋಷವಿರುವುದು ನನ್ನಲ್ಲಿ! ಇಂದಿರೆ, ನಡೆ. ದೋಷಿಯಾದ ನನ್ನ ಬಳಿ ನಿರ್ದೋಷಿಯಾದ ನೀನು ಇರಬಾರದು. ನಿನ್ನ ಕೆಲಸ ನೋಡು.

**ಇಂದಿರೆ**—ಈ ಮಾತಿನ ಅರ್ಥವೇ ನನಗಾಗದು. ಪ್ರಿಯ, ನನ್ನನ್ನು ಈ ರೀತಿ ಏಕೆ ಕೊರಗಿಸುತ್ತಿರುವಿರಿ?

**ತಾರಾನಾಥ**—ನಿನ್ನನ್ನು ಕೊರಗಿಸುತ್ತಿರುವುದೆ? ಇಂದಿರೆ, ನನ್ನ ಹೃದಯದ ಸಂತಾಪವನ್ನು ನೀನು ಬಲ್ಲೆಯಾ?

**ಇಂದಿರೆ**—ಏತಕ್ಕಾಗಿ ನೀವು ಸಂತಾಪಪಡುತ್ತಿರುವುದು? ಯಾರು ಏನು ಮಾಡಿದರು?

**ತಾರಾನಾಥ**—ಯಾರೂ ಏನೂ ಮಾಡಲಿಲ್ಲ. ನಾನೇ ನನ್ನಷ್ಟಕ್ಕೆ ಸಂತಾಪಪಡುತ್ತಿರುವೆನು ನೀನು ನಡೆ. ನಿನ್ನ ಸಮಾಧಾನೋಕ್ತಿಯು ನನಗೆ ಬೇಕಾಗಿಲ್ಲ. ನಿನ್ನ ಸಾಮೀಪ್ಯವು ನನ್ನ ಹೃದಯದ ಕಿಚ್ಚನ್ನು ಮತ್ತಷ್ಟು ಜ್ವಲಿಸುವುದು. ನಡೆ, ನಿಲ್ಲಬೇಡ.

(ಮನೋಹರನು ಪ್ರವೇಶಿಸುವನು.)

**ಇಂದಿರೆ**—ಅಣ್ಣಾ, ಇವರು ಈ ರೀತಿ ವರ್ತಿಸಲು ಕಾರಣವೇನೆಂಬುದನ್ನು ನೀವಾದರೂ ಕೇಳಿ. ನನಗೆ ಇದರ ಅರ್ಥವೇ ಆಗದು. ಅವರು ನನ್ನನ್ನು ತೀವ್ರವಾಗಿ ದ್ವೇಷಿಸುವಂತಿದೆ. ನನ್ನ ಸಾಮೀಪ್ಯವು ಅವರಿಗೆ ಸಂತಾಪಕರವಾಗುವುದಂತೆ!

**ಮನೋಹರ**—ತಾರಾನಾಥ, ಇದು ಏನು ವಿಚಿತ್ರ ಪರಿವರ್ತನೆ?

ಮನಬಿಚ್ಚಿ ಹೇಳು. ನಾನು ನಿನ್ನ ಆಪ್ತನೆಂದಾದರೆ, ಅಂತರಂಗದಲ್ಲಿರುವು ದನ್ನೆಲ್ಲಾ ಮರೆಮಾಜದೆ ತಿಳಿಸು.

**ತಾರಾನಾಥ**—ನೀನು ನನ್ನ ಪರಮಾಪ್ತ! ನಿನಗೆ ನನ್ನ ಆಂತರ್ಯ ವನ್ನರುಹಬೇಕೆ? ನೀನು ಇಲ್ಲಿಗೆ ಬಂದ ಆಂತರ್ಯವನ್ನು ನನಗೆ ತಿಳಿಸುವೆಯಾ?

**ಮನೋಹರ**—ಅಂದರೇನು? ನಾನು ಇಲ್ಲಿಗೆ ಬರಲಾಗದೆ?

**ತಾರಾನಾಥ**—ಬರಲಾಗದೆಂದು ಯಾರು ಹೇಳಿದರು? ನಾನು ಹೇಳಿ ದರೂ ನಿನ್ನ ಮನಸ್ಸು ಒಪ್ಪುವುದೇ?

**ಮನೋಹರ**—ತಾರಾನಾಥ, ಈ ನಿನ್ನ ವರ್ತನೆಯು ಅತಿ ವಿಚಿತ್ರ ವಾದುದು. ನಮ್ಮಿಬ್ಬರ ಸ್ನೇಹಲತೆಯ ತಾಯಿಬೇರನ್ನೇ ಆವುದೋ ವಿಷಕೀಟ ವೊಂದು ಕೊರೆಯುತ್ತಿರುವಂತಿದೆ. ನನ್ನ ಆಗಮನವು ನಿನಗೆ ಅಸಹನೀಯ ವಾದರೆ ಇನ್ನು ನಾನು ಬರುವುದೇ ಇಲ್ಲ ಇದೋ ಹೊರಟೆನು.

**ಇಂದಿರೆ**—ಅಣ್ಣಾ, ನಿಲ್ಲಿ. ಒಮ್ಮೆಯೇ ಕೋಪಕ್ಕೆ ಮನಸ್ಸು ಕೊಡ ಬೇಡಿ ಇತ್ತಿತ್ತ ಇವರ ಮನಸ್ಸೇ ಕೆಟ್ಟುಹೋದಂತಿರುವುದು.

**ತಾರಾನಾಥ**—ಸರಿಸರಿ, ಮನೋಹರ! ಹೋಗಬೇಡ, ನಿಲ್ಲು! ನಿಲ್ಲು! ನನ್ನ ಮನೋಸ್ಥಿತಿಯು ಕೆಟ್ಟಿರುವುದು! ಸ್ವಸ್ಥಚಿತ್ತನಾದ ನೀನು ಅವಳ ಬಳಿ ಇರಲೇ ಬೇಕು!

**ಮನೋಹರ**—ತಾರಾನಾಥ, ಇಂದು ನೀನು ಮೊದಲಿನ ತಾರಾನಾಥ ನಲ್ಲ. ನಿನ್ನ ಮನಸ್ಸು ಆವುದೋ **ಸಂಶಯ ಪಿಶಾಚಿ**ಗ್ರಸ್ತವಾಗಿರುವುದು. ಚಿಕ್ಕಂದಿನಿಂದಲೂ ಬೆಳೆದು ಬಂದ ನಮ್ಮಿಬ್ಬರ ಪರಸ್ಪರ ವಿಶ್ವಾಸಪೂರ್ಣವಾದ ಮೈತ್ರಿಯ ಕಟ್ಟಡವನ್ನು, ಆವುದೋ ಸುಳಿಗಾಳಿಯು ತಳಮುಗುಚಿರುವುದು. ನಿನ್ನ ಹೃದಯವನ್ನು ಆವರಿಸಿರುವ ಸಂದೇಹವನ್ನು ನೀನು ಮನಬಿಚ್ಚಿ ಹೇಳುವುದಿಲ್ಲ. ಆಗಲಿ, ಕಾಲವು ತನ್ನಷ್ಟಕ್ಕೇನೇ ಎಲ್ಲವನ್ನೂ ಬಯಲು ಮಾಡುವುದು. ತಂಗಿ, ಈಗ ನಾನು ಹೋಗುವೆನು. ನಿನಗೇನೋ ವಿಪತ್ತು ಉಂಟಾಗುವಂತಿರುವುದು. ಎಂತಹ ಸಂಕಷ್ಟದಲ್ಲಿಯೂ ಧೃತಿಗೆಡದೆ ಸ್ಥಿರ ಚಿತ್ತದಿಂದಿರು. ನಿಷ್ಕಳಂಕ ಸ್ವಭಾವವು ದಿನಕರನಂತೆ ಒಮ್ಮೆಗೆ ಕಾರ್ಮುಗಿ ಲಿನಿಂದ ಆವರಿತವಾದರೂ ಕಟ್ಟಕಡೆಗೆ ಅತ್ಯುಜ್ವಲ ಪ್ರಕಾಶದಿಂದ ಬೆಳಗದಿರದು.

**(ಹೋಗಿಬಿಡುವನು.)**

**ತಾರಾನಾಥ**—ಇಂದಿರೆ, ಮನೋಹರನು ಹೋದನು. ನೀನೂ ಹೋಗಬಹುದಲ್ಲವೆ?

**ಇಂದಿರೆ**—ನಾನು ನಿಮ್ಮನ್ನು ಬಿಟ್ಟು ಎಲ್ಲಿಗೆ ಹೋಗಲಿ? ಪ್ರಿಯ, ಏಕೆ ಹೀಗೆ ಮಾತನಾಡುತ್ತಿರುವಿರಿ? ನಿಮ್ಮ ಮನಸ್ಸನ್ನು ಯಾರು ಕೆಡಿಸಿರುವರು? ಯಾರ ಚಾಡಿಯನ್ನು ಕೇಳಿರುವಿರಿ?

**ತಾರಾನಾಥ**—ಇಂದಿರೆ, ನಡೆ. ಹೆಚ್ಚು ಮಾತನಾಡಬೇಡ. ನನ್ನನ್ನು ನನ್ನಷ್ಟಕ್ಕಾದರೂ ಇರಬಿಡು. ಹೋಗು.

(ಇಂದಿರೆಯು ಹೋಗುವಳು.)

---

# ೧೩ನೇ ದೃಶ್ಯ

[ತಮ್ಮ ಒಳಸಂಚಿನ ಗುಟ್ಟನ್ನು ಯಾರಿಗೂ ತಿಳಿಸದಂತೆ ಸಂಜೀವನೂ ಚಂದು ಸೆಟ್ಟಿಯೂ ಸೋಮನನ್ನು ಬೆದರಿಸುವರು]

**ಸಂಜೀವ**—ಸೋಮ, ನೀನು ಇಷ್ಟರ ವರೆಗೆ ಆ ಗುಟ್ಟನ್ನು ಯಾರಿಗೂ ತಿಳಿಸಿಲ್ಲವೆಂಬುದು ನಿಶ್ಚಯವಲ್ಲವೆ?

**ಸೋಮ**—ಇಷ್ಟರ ವರೆಗೆ ಯಾರಿಗೂ ತಿಳಿಸಲಿಲ್ಲ. ಆದರೆ............

**ಚಂದು**—ಆದರೆ ಏನು? ಯಾರಿಗಾದರೂ ತಿಳಿಸಿದರೆ ಜಾಗ್ರತೆ! ನಿನ್ನ ಎಲುಬು ಒಂದೂ ಉಳಿಯದಂತೆ ಪುಡಿಮಾಡಿಬಿಟ್ಟೇನು. ಪ್ರಾಣದಾಶೆ ಇದ್ದರೆ ಆ ಕುರಿತು ತುಟಿ ಎತ್ತದಿರಬೇಕು. ಜಾಗ್ರತೆ!

**ಸೋಮ**—ಇಂದಿರಮ್ಮನವರು ಬಹಳ ಒಳ್ಳೆಯವರು. ಈಗ ಅವರ ಮುಖವನ್ನು ನೋಡಿದರೆ ನನ್ನ ಎದೆ ಒಡೆದು ಹೋಗುವುದು. ಅಹ! ನಾನೆಂತಹ ಪಾಪ ಮಾಡಿದೆ!

**ಸಂಜೀವ**—ಏನೆಂದೆ? ನಿನಗೆ, ನಾಯಿಮರಿಗೆ ಪಾಪಪುಣ್ಯ! ಚಂದು, ಹಿಡಿ ಇವನನ್ನು. ಈಗಲೇ 'ಫೈಸಲ್' ಮಾಡಿಬಿಟ್ಟರೆ ಮತ್ತೆ ಯಾವ ತೊಂದರೆಯೂ ಇಲ್ಲ. ಮತ್ತೆ ಎಲ್ಲಿಯ ಪಾಪಪುಣ್ಯ ನೋಡುವ

**ಸೋಮ**—ಇಲ್ಲ ಸ್ವಾಮಿ, ಇಲ್ಲ. ನೀವು ಹೇಳಿದ ಹಾಗೆ ಕೇಳುತ್ತೇನೆ. ಯಾರಿಗೂ ಹೇಳುವುದಿಲ್ಲ. ಒಮ್ಮೆ ಮಾಫಿ ಬಿಡಿ, ದಮ್ಮಯ್ಯ!

**ಸಂಜೀವ**—ಹಾಗಾದರೆ, ಇಗೋ, ಈ ಶಾಲು. ನಿನಗೆ ಬೇಕಾದಾಗ ಎಷ್ಟು ಹಣ ಬೇಕಾದರೂ ಕೇಳು. ಇಷ್ಟೇ ಅಲ್ಲ, ಇನ್ನು ಮುಂದೆ ಇದಕ್ಕಿಂತಲೂ ಹೆಚ್ಚಿನದು ನಿನಗೆ ದೊರೆಯಬಹುದು. ಗುಟ್ಟು ಮಾತ್ರ ಬಿಡಬೇಡ.

**ಚಂದು**–ಜಾಗ್ರತೆ! ನಿನಗೆ ಅನಂತರ ಮನೆಗಿನೆ ಕಟ್ಟಿಸಿಕೊಟ್ಟು ಮದುವೆ ಮಾಡಿಸುವ ತಿಳಿಯಿತೆ?

**ಸೋಮ**—ಆಯಿತು. ಸ್ವಾಮಿ, ಆಯಿತು.

**ಚಂದು**—ಹೋಗು, ನಡೆ.

**ಸಂಜೀವ**—ಚಂದು, ಹೇಗೆ ಉಪಾಯ? ಉಪಾಯವೊಂದಿದ್ದರೆ ಎಂತಹ ಕೆಲಸವನ್ನಾದರೂ ಸಾಧಿಸಬಹುದು ಅಲ್ಲವೆ?

**ಚಂದು**—ಉಪಾಯವಿದ್ದರೆ ಮಾತ್ರ ಸಾಲದು. ನನ್ನ ಸಹಾಯವೂ ಬೇಕು. ರಥಿಕ ನೀವಾದರೂ ಸಾರಥಿ ನಾನು.

**ಸಂಜೀವ**—ಸ್ವಲ್ಪ ಸುಮ್ಮನಿರು. ಇಲ್ಲಿಗೆ ಬಂದು ತಲೆ ತುಂಬಾ ಮಾತನಾಡಬೇಡ.

**ಚಂದು**—ಪಾಪ! ಆ ಇಂದಿರಮ್ಮ ಒಳ್ಳೆಯವರೆಂಬುದಕ್ಕೆ ಸಂದೇಹ ವಿಲ್ಲ. ಅದರಲ್ಲೂ ಗರ್ಭಿಣಿ. ಅವರ ಅನ್ನ ತೆಗೆಯಲು ನೋಡುವ ನೀವು ಏನೂ ಮಾಡುವಿರಿ.

**ಸಂಜೀವ**—ಸೈತಾನನ ಶಾಸ್ತ್ರೋಪದೇಶವೇ? ಸಾಕು! ಸಾಕು! ಬಾಯಿ ಮುಚ್ಚುತ್ತೀಯೋ ಇಲ್ಲವೋ? ಅದಾರೋ ಬರುತ್ತಿರುವರು?

(ಮನೋರಮೆಯೂ ತುಂಗಮ್ಮನೂ ಪ್ರವೇಶಿಸುವರು.)

**ತುಂಗಮ್ಮ**—ಸಂಜೀವ, ತಾರಾನಾಥನು ಇಂದಿರೆಯನ್ನು ತವರು ಮನೆಗೆ ಕಳುಹಿಸುವ ವಿಷಯದಲ್ಲಿ ಇನ್ನೂ ಚಂಚಲಪಡುತ್ತಲೇ ಇರುವನು. ಆ ಸೋಮನಿಗೆ ಇಂದಿರೆಯೆಂದರೆ ಬಹು ಪ್ರೀತಿ. ಎಲ್ಲಿಯಾದರೂ ನಮ್ಮ ರಹಸ್ಯವನ್ನು ಹೇಳಿಬಿಟ್ಟರೆ?

**ಸಂಜೀವ**—ಅದಕ್ಕೆ ತಕ್ಕ ವ್ಯವಸ್ಥೆಯನ್ನು ಮಾಡಿರುವೆನು, ಆ ವಿಷಯದಲ್ಲಿ ನಿಮಗೆ ಭೀತಿ ಬೇಡ. ನೀವು ತಾರಾನಾಥನನ್ನು ಬೇಗ ಇಲ್ಲಿಗೆ ಕಳುಹಿಸಿ. ಅವನು ಈಗಲೇ ಇಂದಿರೆಯನ್ನು ಕಳುಹಿಸಿಬಿಡುವ ನಿರ್ಧಾರಕ್ಕೆ ಬರುವಂತೆ ಮಾಡುವೆನು.

**ತುಂಗಮ್ಮ**—ಅದು ಹೇಗೆ?

**ಸಂಜೀವ**—ಅದು ಹೇಗೆಂಬುದನ್ನು ಈಗಲೇ ನೋಡುವಿರಿ.

(ತಾರಾನಾಥನು ಅತ್ಯಂತ ಖಿನ್ನನಾಗಿ ಪ್ರವೇಶಿಸುವನು)

**ಸಂಜೀವ**—ಲೋಕಕ್ಕೆಲ್ಲಾ ಬುದ್ಧಿ ಹೇಳ ಹೊರಟಿರುವ ಮಹಾಶಯರು ಈಗ ತಾನೇ ಮಾಡುತ್ತಿರುವುದೇನು? ತಾರಾನಾಥ, ನಿನ್ನ ವಿಷಯದಲ್ಲಿ ಜನರು ಏನು ಹೇಳುತ್ತಿರುವರೆಂಬುದನ್ನು ಬಲ್ಲೆಯಾ? ನಮಗೆ ಅದನ್ನು ತಿಳಿಸಲೂ ನಾಚಿಕೆಯಾಗುತ್ತದೆ.

**ಚಂದು**—ಹೌದು ಸ್ವಾಮಿ. 'ಮರ್ಯಾದಸ್ಥರು ಅಂತಹ ಹೆಂಗುಸನ್ನು ಮನೆಯಲ್ಲಿ ಇಟ್ಟುಕೊಳ್ಳಲಿಕ್ಕಿಲ್ಲ' ಎಂದು ಜನರಾಡಿಕೊಳ್ಳುತ್ತಿದ್ದಾರೆ.

**ತುಂಗಮ್ಮ**—ನಮಗೆ ಮರ್ಯಾದೆಯಿದ್ದರೆ! ಇಂಗ್ಲಿಷ್ ಕಲಿತವರು ಏನು ಮಾಡಿದರೂ ಚಂದ!

**ಮನೋರಮೆ**—ಅಣ್ಣಾ, ಇಷ್ಟೊಂದು ಮರ್ಯಾದೆ ಕೆಟ್ಟೂ ಆ ಗಯ್ಯಾಳಿಯನ್ನು ಮನೆಯಲ್ಲಿ ಇಟ್ಟುಕೊಳ್ಳಬೇಕೆ?

**ತಾರಾನಾಥ**—ಸೋಮು, ಹೋಗು, ಇಂದಿರೆಯನ್ನು ಕೂಡಲೆ ಮನೆಯಿಂದ ಹೊರಟು ಹೋಗ ಹೇಳು.

**ಸೋಮು**—ಆಯಿತು ಸ್ವಾಮಿ. (ಬಹಳ ದುಃಖದಿಂದ ಒಳಹೋಗಿ ಇಂದಿರೆಗೆ ತಿಳಿಸುವನು. ಇದರಿಂದ ಸ್ತಂಭಿತಳಾದ ಇಂದಿರೆಯು ಮೂರ್ತಿಯಂತೆ ತಾರಾನಾಥನ ಇದಿರಲ್ಲಿ ಬಂದು ನಿಲ್ಲುವಳು. ತಾರಾನಾಥನು ಅವಳ ಮುಖವನ್ನು ನೋಡದೆ ಸುಮ್ಮನೆ ನಿಲ್ಲುವನು ಎಲ್ಲರೂ ಸ್ವಲ್ಪ ಸಮಯ ಮೌನವಾಗಿರುವರು.)

**ತುಂಗಮ್ಮ**—ಇಂದಿರೆ, ನೀನು ಇಷ್ಟು ಮಾಡಿದ್ದು ಸಾಕು. ಇನ್ನು ಮುಂದೆ ನಿನ್ನ ತವರುಮನೆಗೆ ಹೋಗಬಹುದೆಂದು ನಿನ್ನ ಗಂಡನೇ ಈಗ ಆಜ್ಞಾಪಿಸಿರುವನು. ಅದನ್ನು ನಿನಗೆ ಸೋಮುನು ತಿಳಿಸಲಿಲ್ಲವೇ?

**ಇಂದಿರೆ**—ನಾನು ಮಾಡಿದ ತಪ್ಪೇನು?

**ತಾರಾನಾಥ**—ನೀನೇನೂ ತಪ್ಪು ಮಾಡಿಲ್ಲ! ನಿನ್ನ ಈ ಕಪಟವು ಇನ್ನು ನಡೆಯದು. ಇದಿರುಮಾತನಾಡಬೇಡ. ನಡೆ.

**ತುಂಗಮ್ಮ**—ಹೌದು. ಇಷ್ಟರ ವರೆಗೆ ಕಾದಾಡಿದುದೇ ಸಾಕು.

**ಇಂದಿರೆ**—(ತುಸು ಹೊತ್ತು ಸುಮ್ಮನಿದ್ದು ಅನಂತರ ನಿಟ್ಟುಸಿರು ಬಿಡುತ್ತಾ

ದುಃಖಾತಿಶಯದಿಂದ ತಾರಾನಾಥನ ಕಾಲಡಿಯಲ್ಲಿ ಮೊಣಕಾಲೂರಿ) ಪ್ರಿಯಕರ, ನನ್ನ ತಪ್ಪು ಏನು ಎಂದಾದರೂ ಹೇಳಬಾರದೇ? ನನ್ನನ್ನು ಈ ರೀತಿ ಸೂಜಿಯ ಮೊನೆಯ ಮೇಲಿರಿಸಿ ಕೊಲ್ಲುವಿರಾ? ತಪ್ಪನ್ನು ತಿಳಿಸದೆ ಓರ್ವ ವ್ಯಕ್ತಿಯನ್ನು ಏಕಾಏಕಿ ಗಲ್ಲಿಗೇರಿಸುವುದು ಯಾವ ನ್ಯಾಯ? (ತಾರಾನಾಥನು ಮೌನವಾಗಿರುವುದನ್ನು ಕಂಡು ಎದ್ದು) ಯಾಕೆ ಸುಮ್ಮನಿರುವಿರಿ? ನನ್ನೀ ಸಂತಾಪವು ನಿಮಗೆ ಚಂದವೆಣಿಸುವುದೆ? ನಿಮ್ಮ ಹೃದಯದ ಕನಿಕರದ ಬುಗ್ಗೆಯು ಇಷ್ಟೊಂದು ಬತ್ತಿಹೋಯಿತೆ? ಮಾಟಮಾಡಿ ಯಾರು ನಿಮ್ಮನ್ನು ಮಂಕುಗೊಳಿಸಿದರಪ್ಪ!

**ತುಂಗಮ್ಮ**—ನೀನೆ!

**ಇಂದಿರೆ** (ಅತ್ತೆಯ ಕಾಲುಹಿಡಿದು) ನಾನು ಮಾಡಿದ ಅಪರಾಧವೇನಾದರೂ ಇದ್ದರೆ ನಿಮ್ಮ ಮಗಳಂತೆ ಕ್ಷಮಿಸಿರಿ. ನನ್ನಂತೆಯೇ ಓರ್ವಪುತ್ರಿಯಿರುವ ನಿಮಗೆ ಕರುಣೆಯ ಕರುಳಿಲ್ಲವೆ? ಮಮತೆಯ ಹೃದಯವಿಲ್ಲವೆ? ಸ್ತ್ರೀಸಹಜ ಅಂತಃಕರಣವಿಲ್ಲವೆ? ತನ್ನ ತಪ್ಪೇನೆಂದು ನೀವಾದರೂ ಹೇಳಬಾರದೇ?

**ತುಂಗಮ್ಮ**—ಇದು ಈಗ ನೆನಪಾಯಿತೆ? ಮೊದಲೇ ಆಲೋಚನೆ ಮಾಡಿಕೊಳ್ಳಬೇಕಿತ್ತು!

**ಇಂದಿರೆ**—(ಕ್ರುದ್ಧಳಾಗಿ ಎದ್ದು ನಿಂತು ಪುನಃ ಸಂತಾಪಾತಿಶಯದಿಂದ ಮನೋರಮೆಯನ್ನು ಸಂಬೋಧಿಸಿ) ಅಕ್ಕಾ, ನೀವಾದರೂ ನನ್ನ ತಪ್ಪೇನೆಂದು ತಿಳಿಸುವಿರಾ? ನನ್ನ ದೋಷವು ಇಂತಹುದು ಎಂದು ಹೇಳಿದರೆ ನಾನು ಸಂತೋಷದಿಂದ ನನ್ನ ಮನೆಗೆ ಹೋಗುವೆನು.

**ಮನೋರಮೆ**—ಅದು ಕ್ರಮೇಣ ತಾನಾಗಿ ತಿಳಿಯುವುದು. ನಾವು ಹೇಳಬೇಕಾಗಿಲ್ಲ.

**ಇಂದಿರೆ**—ಅಹ! ಯಾರನ್ನು ನಾನು ಜೀವನದ ಏಕಮಾತ್ರ ಆಶಯವೆಂದು ನಂಬಿಕೊಂಡಿದ್ದೆನೋ, ಯಾರಿಗಾಗಿ ನನ್ನ ಜೀವ, ಭಾವ, ಹೃದಯವನ್ನೆಲ್ಲಾ ಸಮರ್ಪಿಸಿದ್ದೆನೋ, ಎಂತಹ ವಿಪತ್ತಿನಲ್ಲಿಯೂ ಯಾರು ನನ್ನ ಸಹಾಯಕರಾಗಬೇಕಾಗಿದ್ದಿತೋ, ಅವರೇ ಈಗ ನನ್ನ ಕೈಬಿಟ್ಟಿರುವಾಗ ನಾನು ಅನ್ಯರನ್ನೇಕೆ ದೂರಬೇಕು? ಆಯಿತು, ಪ್ರಾಣನಾಥ, ನಾನು ನಿಮ್ಮನ್ನಗಲಿ ಇರುವುದರಿಂದಲೇ ನಿಮಗೆ ಸುಖವು ಎಂದಾದರೆ, ಅದರಿಂದಲೇ ನಿಮ್ಮಲ್ಲಿ

ಶಾಂತಿಯುಂಟಾಗುವುದಾದರೆ, ನಾನು ಸಂತೋಷದಿಂದ ನನ್ನ ತವರುಮನೆಗೆ ಹೋಗುವೆನು. ಆದರೆ ನಿಮ್ಮಲ್ಲಿ ಯಾರಾದರೂ ನನ್ನ ಅಪರಾಧವೇನೆಂಬು ಹೇಳುತ್ತಿದ್ದರೆ ನನಗೆ ಮಹದುಪಕಾರ ಮಾಡಿದಂತಾಗುತ್ತಿತ್ತು.

**ಸಂಜೀವ**—'ತಪ್ಪೇನು ತಪ್ಪೇನು' ಎಂಬ ಪಲ್ಲವಿ ಹಾಡುವುದರಿಂದ ಪ್ರಯೋಜನವೇನು? ಬೇರೆಯವರನ್ನು ಕೇಳುವುದಕ್ಕಿಂತ ತಾನೇ ವಿಚಾರಿಸಿದರೆ ತಿಳಿಯದೇ? ನಿನಗೂ, ಅತ್ತೆ ಮತ್ತು ಮನೋರಮೆಯರಿಗೂ ಸರಿಹೋಗುವುದಿಲ್ಲ. ತಾರಾನಾಥನು ಒಂದೋ ನಿನ್ನನ್ನು ಮನೆಯಿಂದ ಕಳುಹಿಸಬೇಕು; ಇಲ್ಲವೆ, ತನ್ನ ತಾಯಿತಂಗಿಯರನ್ನು ಮನೆಯಿಂದ ಹೊರಡಿಸಬೇಕು. ಅವನು ನಿನ್ನನ್ನೇ ಈಗ ತವರುಮನೆಗೆ ಕಳುಹಿಸುವ ನಿರ್ಧಾರ ಮಾಡಿರುವನು. ಇನ್ನು ಬೇರೆ ಕಾರಣಗಳೂ ಇವೆ.

**ಇಂದಿರೆ**—ಅದಾದರೂ ಅವರ ಬಾಯಿಯಿಂದ ಬರಲಿ.

**ತಾರಾನಾಥ**—ಯಾರ ಬಾಯಿಯಿಂದ ಬಂದರೇನು? ಅವನು ನನ್ನ ಭಾವನಲ್ಲವೇ?

**ಇಂದಿರೆ**—ಆಯಿತು ಪ್ರಿಯ, ಆಯಿತು. ನೀವು ನಿಮ್ಮ ತಾಯಿತಂಗಿಯರೊಂದಿಗೆ ಸುಖವಾಗಿರುವ ನಿಮಿತ್ತ ನಾನು ಸಂತೋಷದಿಂದ ನಿಮ್ಮಿಂದ ದೂರವಾಗುವೆನು. ಆದರೆ, ನನ್ನ ನಿರ್ದೋಷ ನಿಷ್ಕಳಂಕತೆಗೆ ದೇವರೇ ಸಾಕ್ಷಿ

**ತುಂಗಮ್ಮ**—ಹೌದು. ನಿನಗೆ ಒಬ್ಬ ದೇವರು!

**ಇಂದಿರೆ**—ಅತ್ತೆ, ಸಿಟ್ಟುಮಾಡಬೇಡಿ. ನನ್ನನ್ನು ಕಳುಹಿಸಿಕೊಡುವಾಗಲಾದರೂ ಸಂತೋಷದಿಂದ ಕಳುಹಿಸಿಕೊಡಿ.

**ತುಂಗಮ್ಮ**—ಏನು ಭಾಗ್ಯ ಮಾಡಿದವಳು ನೀನು!

**ಇಂದಿರೆ**—ಏನು ಭಾಗ್ಯ ಮಾಡಿದವಳೇ? ನಿಮ್ಮ ಮನೆಯಲ್ಲಿ ಚಾಕರಿಯವಳಂತೆ ಸೇವೆ ಮಾಡಿದುದು ಸಾಕಾಗಲಿಲ್ಲವೆ? ಆಯಿತು, ನೀವು ನನಗಿಂತಲೂ ಒಳ್ಳೆಯ ಸೊಸೆಯನ್ನು ತಂದುಕೊಳ್ಳಿರಿ. ಇದು ಯಾರ ಮಾಟವೆಂಬುದನ್ನು ನಾನು ಬಲ್ಲೆನು. ಆದರೆ, ಮನೆಬಿಟ್ಟು ಹೋಗುವಾಗ ಜಗಳಮಾಡಿ ಹೋದಳೆಂದು ನೀವು ಮತ್ತೆ ಸಾರುವಂತಾಗಬಾರದೆಂದು ಸುಮ್ಮನಿದ್ದೆ. ಪರಂತು, ನಿಮ್ಮ ವಾಗ್ಬಾಣವು ಅಸಹನೀಯವಾಗಿದೆ. ನನಗೂ ನಿಮ್ಮಂತೆಯೇ ಪ್ರಾಣ, ಮಾನ, ಅಭಿಮಾನವಿದೆ. ನಾನು ಮಣ್ಣಿನ ಗೊಂಬೆಯಲ್ಲ; ಮರದ ಕೊರಡಲ್ಲ.

ನೀವು ಸೊಸೆಯಾಗಿದ್ದಾಗ ಪಟ್ಟ ಕಷ್ಟವನ್ನು ಒಂದಿಷ್ಟು ನೆನಸಿಕೊಳ್ಳುತ್ತಿದ್ದರೆ ನನ್ನನ್ನು ಈ ಪಾಡಿಗೆ ಈಡು ಮಾಡುತ್ತಿದ್ದಿಲ್ಲ! ನಿಮಗೆ ದೇವರು ಒಳ್ಳೇದು ಮಾಡಲಿ! ನಾನು ಸಂತೋಷದಿಂದ ನಿಮ್ಮನ್ನು ಅಗಲುವೆನು.

**ಸಂಜೀವ**—ಹೆಚ್ಚು ಮಾತನಾಡಿ ಪ್ರಯೋಜನವೇನು? ಆಗುವ ಕೆಲಸ ಆಗಿಹೋಯಿತಲ್ಲವೇ? ಅವಳನ್ನು, ಒಂದು ಜನ ಮಾಡಿ ನಾಳೆ ಕಳುಹಿಸಿಬಿಟ್ಟರಾಯಿತು.

**ಇಂದಿರೆ**—ನಾಳೆ ಏಕೆ? ಜನ ಏಕೆ? ಅಷ್ಟರ ಕರುಣೆ ನಿಮಗೆ ಬೇಡ. ನಾನು ಇಂದೇ ಹೋಗುವೆನು. ಆ ಕುರಿತು ನಿಮಗೆ ಯಾವ ಯೋಚನೆಯೂ ಬೇಡ.

**ತುಂಗಮ್ಮ**—ಹಾಗಾದರೆ ಹೋಗಬಹುದಲ್ಲವೆ?

**ಇಂದಿರೆ**—ಆಯಿತು. ಹೊರಟೆನು. (ಒಳಹೋಗುವಳು.)

**ತುಂಗಮ್ಮ**—ಮನೋರ ., ನಾವೂ ಒಳಹೋಗುವ. ಅವಳು ಇದ್ದ ಸಾಮಾನುಗಳನ್ನೆಲ್ಲಾ ಕೊಂಡುಹೋದಾಳು. (ಇಬ್ಬರೂ ಒಳಹೋಗುವರು.)

---

# ೧೪ನೇ ದೃಶ್ಯ

**[ಸಂಜೀವನು ಅವನ ಮನೆ ಚಾವಡಿಯಲ್ಲಿ ಕಠಿಣ ಮೇಹರೋಗದಿಂದ ಮರಣೋನ್ಮುಖನಾಗಿ ಮಲಗಿರುವನು. ಮನೋರಮೆಯೂ, ತುಂಗಮ್ಮನೂ ಒಂದೆಡೆ ಕಣ್ಣೀರಿಡುತ್ತಾ ಕುಳಿತಿರುವರು. ನಾರಾಯಣ ತಂತ್ರಿಯೂ ಇರುವನು.]**

**ಮನೋರಮೆ**—ಅಣ್ಣಾ, ಡಾಕ್ಟರರು ಏನೆಂದರು?

**ತಾರಾನಾಥ**—'ಕಾಯಿಲೆ ಬಹಳ ಕಠಿಣವಿದೆ; ಇನ್ನು ಎರಡುಮೂರು ದಿವಸ ಬಹಳ ಅಪಾಯವಿದೆ' ಎಂದರು.

**ನಾರಾಯಣ ತಂತ್ರಿ**—ನಾನು ಮೊದಲೇ ಹೇಳಲಿಲ್ಲವೆ—ಈಹೊತ್ತು ಏಕಾದಶಿ, ಇನ್ನು ಅಮಾವಾಸೆ ದಾಟುವ ವರೆಗೆ ಕಠಿಣವೆಂದು. ಅದನ್ನು ಡಾಕ್ಟರರು ಹೇಳುವುದೇನು? ಆದರೆ, ಪ್ರಾಣಕ್ಕೇನೂ ಅಪಾಯವಿಲ್ಲ. ಅದು ನಿಶ್ಚಯ

**ಸಂಜೀವ**—(ಸಿಟ್ಟಿನಿಂದ) ಏನು? ಪ್ರಾಣಕ್ಕೇನೂ ಅಪಾಯವಿಲ್ಲವೇ? ತಂತ್ರಿ, ನಡೆ! ಇಲ್ಲಿಂದ ತೊಲಗು. ನೀನು ಇಷ್ಟರವರೆಗೆ ತಂತ್ರ ನಡಿಸಿದುದು ಸಾಕು.

**ನಾರಾಯಣ ತಂತ್ರಿ**—ನಾನೇನು ತಂತ್ರ ನಡಿಸಿದೆ? ಇಷ್ಟೆಲ್ಲಾ ಉಪ ಕಾರ ಮಾಡಿದುದಕ್ಕೆ ಇದೀಗ ತಕ್ಕ ಪುರಸ್ಕಾರವೇ?

**ಸಂಜೀವ**—ನಿನಗೆ ಪುರಸ್ಕಾರ! ಚಂದು, ಈ ತಂತ್ರಿಯನ್ನು ಹೊರ ಹೋಗಹೇಳು. ಇಲ್ಲವಾದರೆ ದೂಡು. ನನಗೆ ಜೀವ ಎಳೆಯುತ್ತದೆ; ಅವನು 'ಜೀವಕ್ಕೇನೂ ಅಪಾಯವಿಲ್ಲ' ಎನ್ನುತ್ತಾನೆ!

**ನಾರಾಯಣ ತಂತ್ರಿ**—ನನ್ನನ್ನು ಯಾರೂ ದೂಡಬೇಕಾಗಿಲ್ಲ. ನಾನೇ ದೂಡಿಕೊಳ್ಳುತ್ತೇನೆ. (ಹೋಗಿಬಿಡುವನು. ಸಂಜೀವನ ಕುಟುಂಬಿಕರಲ್ಲಿ ಎರಡು ಮೂರು ಜನರು ಬಂದು ಹಾಸಿಗೆಯಲ್ಲಿ ಬೀಗದಕೈ ಹುಡುಕಿ ಗಲಾಟೆಯನ್ನೆಬ್ಬಿಸುವರು )

**ಸಂಜೀವ**—ಚಂದು, ಇವರನ್ನೆಲ್ಲಾ ಇಲ್ಲಿಂದ ದೂಡು. ಇದೋ! ಮನೋರಮೆ, ನನ್ನ ಬೀಗದಕೈ ತೆಗೆದುಕೋ. ಒಳಗಿದ್ದುದನ್ನು ಬೇಗ ತೆಗೆ. ಬೀಗದಕೈ ಕೊಡುವಷ್ಟರಲ್ಲಿ ಕುಟುಂಬದವನೊಬ್ಬನು ಅದನ್ನು ಕಸುಕೊಳ್ಳುವನು.) ಅಹ! ತಾರಾನಾಥ, ನಾನು ಬಯಸಿದುದೆಲ್ಲಾ ತಿರುಕನ ಸ್ವಪ್ನವಾಯಿತು. ನನ್ನೀ ಜೀವನವು ಹೀಗೆ ಹಠಾತ್ತಾಗಿ ಕೊನೆಗೊಳ್ಳುವುದೆಂದು ನಾನು ನೆನಸಿರ ಲಿಲ್ಲ ನಾನು ಯಾವ ಆಸ್ತಿ ಬದುಕನ್ನಾದರೂ ಮನೋರಮೆಯ ಹೆಸರಲ್ಲಿ ಮಾಡದೆ ಕೆಟ್ಟೆ. ಹೊಸದಾಗಿ ಕಟ್ಟಿಸಿದ ಈ ಮನೆಯೂ ನನ್ನ ಹೆಸರಲ್ಲೇ ಇರುವುದು. ಎಂತಹ ಅಚಾತುರ್ಯವಾಯಿತು! ಮನೋರಮೆಗೂ ಅವಳ ಮಗುವಿಗೂ ಏನು ಗತಿ? ನೀಚರಾದ ನನ್ನ ಕುಟುಂಬಿಕರು ನನ್ನನ್ನು ಸಜೀವ ವಾಗಿ ಸುಟ್ಟುಬಿಡಲೂ ಸಿದ್ಧರು. ಸಾಕ್ಷಾತ್ ಯಮದೂತರಂತೆ ಅವರು ಹೊಂಚುಹಾಕಿಕೊಂಡಿರುವರು. ಮನೋರಮೆಯನ್ನು, ಅವಳ ದೇಹದ ಹೊರತು ಮತ್ತಾವುದನ್ನೂ ಕೊಂಡೊಯ್ಯಬಿಡರು. ಒಂದು ಕಡ್ಡಿಯನ್ನೂ ಮುಟ್ಟಬಿಡಲಾರರು ಚಂದು, ಚಂದು!

**ತಾರಾನಾಥ**—ಎಲ್ಲಿದ್ದಾನೆ ಚಂದು? ಅವನು ನಿನ್ನ ಕುಟುಂಬದವ ರೊಂದಿಗೆ ಸೇರಿರುವನು.

**ಸಂಜೀವ**—ಅಹ! ಘಾತಕಿ! ತಾರಾನಾಥ, ನಾನು ಮಾಡಿದುದನ್ನು

ನಾನೇ ಉಣ್ಣುತ್ತಿರುವೆನು ಜೀವಿತವೃಕ್ಷಣಿಕವೆಂಬುದನ್ನು ಮರೆತು ಚಿರಂಜೀವಿ ಯೆಂಬಂತೆ ಬಾಳಿದೆನು. ಅಯ್ಯೋ! ಮೋಸಹೋದೆನು.

**ತಾರಾನಾಥ**—ನಿನಗೆ ಮನೋರಮೆಯ ಅಥವಾ ಅವಳ ಮಗುವಿನ ವಿಷಯದಲ್ಲಿ ಯಾವ ಆತುರವೂ ಬೇಡ. ಶಾಂತಚಿತ್ತನಾಗು. ವೃಥಾ ತಳ ಮಳಿಸಬೇಡ. ನಾನಿರುವವರೆಗೆ ಅವರಿಗೆ ಯಾವ ತೊಂದರೆಯೂ ಬರಲಾರದು.

**ಸಂಜೀವ**—ತಾರಾನಾಥ, ನಿನ್ನ ಮಾತನ್ನು ಕೇಳುತ್ತಿದ್ದರೆ ನನಗೆ ಈ ಅವಸ್ಥೆಯು ಉಂಟಾಗುತ್ತಿದ್ದಿತೇ? ನಾನು ಈ ಘನ ರೋಗಕ್ಕೆ ಬಲಿಯಾಗು ತ್ತಿದ್ದೆನೇ? ಆ ತಂತ್ರ, ಮಂತ್ರ, ಬಲಿ, ಹೋಮಗಳಿಗೆ ನೂರಾರು ರೂಪಾಯಿ ಗಳನ್ನು ವೆಚ್ಚಮಾಡಿದೆನೇ ಹೊರತು ಡಾಕ್ಟರರನ್ನು ಕರೆಯಿಸಲಿಲ್ಲ.

**ತಾರಾನಾಥ**—ಭಾವ, ಮಿಂಚಿದ ಕಾರ್ಯಕ್ಕೆ ಚಿಂತಿಸಿ ಫಲವೇನು? ಮರಣಶಯ್ಯೆಯಲ್ಲಿ ಶಾಂತಚಿತ್ತದಿಂದ ಭಗವಂತನನ್ನು ಧ್ಯಾನಿಸು.

**ಸಂಜೀವ**—ಅಹ! ನಾನು ಪರಮಾತ್ಮನನ್ನು ಧ್ಯಾನಿಸುವುದೆ? ನನಗೆ ಆ ಮನಶ್ಶಾಂತಿಯಾದರೂ ಎಲ್ಲಿಂದ ಬರಬೇಕು? ತಾರಾನಾಥ, ನಾನು ಮಾಡದ ದುಷ್ಕೃತ್ಯ ಯಾವುದಿದೆ? ಇಲ್ಲ! ಇಲ್ಲ! ನರಕದಲ್ಲಿಯೂ ನನಗೆ ಸ್ಥಳ ಸಿಗದು! ನನಗಾಗಿ ಪ್ರತ್ಯೇಕ ನರಕವೊಂದನ್ನು ನಿರ್ಮಿಸಬೇಕಾದೀತು!

**ತಾರಾನಾಥ**— ಇದೇನು ಮಾತು ಸಂಜೀವ? ಎಂತಹ ಪಾಪಿ ಹೃದಯ ವಾದರೂ ಪಶ್ಚಾತ್ತಾಪದಿಂದ ದಗ್ಧವಾದರೆ ಸ್ವತಃ ಪಾವನವಾಗಿ ಸದ್ಗತಿಗೆ ಪಾತ್ರ ವಾಗುವುದೆಂಬುದನ್ನು ತಿಳಿಯೆಯಾ?

**ಸಂಜೀವ**—ಹೌದು, ಸದ್ಗತಿ! ನಾನು ಮಾಡಿದ ಪೈಶಾಚಿಕ ಕೃತ್ಯಗಳೇ ಪ್ರೇತರೂಪದಲ್ಲಿ ನನ್ನನ್ನು ಮುತ್ತಿ ತಿನ್ನುತ್ತಿರುವಾಗ ನನಗೆ ಎಲ್ಲಿಯ ಸದ್ಗತಿ?

**ತಾರಾನಾಥ**—ಸಂಜೀವ, ಸುಮ್ಮನಿರು. ಏಕೆ ಹೀಗೆ ಕಳವಳಪಡುವೆ?

**ಸಂಜೀವ**—ಸುಮ್ಮನಿರುವುದೆ? ಅದೋ! ತಾರಾನಾಥ, ಎಂತಹ ಭಯಂಕರ ರೂಪಗಳೆಲ್ಲಾ ನನ್ನನ್ನು ಬೆದರಿಸುತ್ತಿರುವುವು! ಹಾ! ಇಂದಿರೆ, ಇಂದಿರೆ! ನಾನು ಮಹಾಪರಾಧವನ್ನು ಮಾಡಿದೆ. ನೀನು ನಿಜವಾಗಿಯೂ ನಿರ್ದೋಷಿ! ಹಾ! ತಾರಾನಾಥ, ಕ್ಷಮಿಸು! ಕ್ಷಮಿಸು! ಕ್ಷಮಿಸಿದೆಯಾ? ಕ್ಷಮಿಸು! ಕ್ಷಮಿಸು! (**ರುದ್ಧಕಂಠನಾಗಿ ಮಾತನಾಡಲಾರದೆ ಸುಮ್ಮನೆ ದೀರ್ಘ ನಿಶ್ವಾಸ ಬಿಡುತ್ತಾ ಬಿದ್ದುಬಿಡುವನು.**)

**ತಾರಾನಾಥ**—(ಕೈ ಹಿಡಿದು ಅಲುಗಿಸಿ) ಸಂಜೀವ, ಸಂಜೀವ! ನಾನು ಏನನ್ನು ಕ್ಷಮಿಸಲಿ? ಇದೋ! ಕ್ಷಮಿಸಿದೆ. ಕ್ಷಮಿಸಿದೆ. ಮಾತಾಡು. ಏಕೆ ಸುಮ್ಮನಿರುವೆ? (ಮರುಗುವನು. ತುಂಗಮ್ಮ, ಮನೋರಮೆಯರೂ ಮರುಗುವರು. ಆಗ ಸಂಜೀವನ ಕುಟುಂಬಸ್ಥರೆಲ್ಲ ಬಂದು, ಅವನ ಉಂಗುರ, ನೇವಾಳ, ಒಂಟಿಗಳನ್ನೆಲ್ಲಾ ತೆಗೆಯ ನೋಡುವರು.) ಅಹ! ನಿಮಗೆ ಇಷ್ಟು ಅವಸರವೇನು? ಪೂರ್ಣ ಪ್ರಾಣ ಹೋಗುವ ವರೆಗಾದರೂ ಸಮಯವಿಲ್ಲವೆ?

**ಕುಟುಂಬಿಕ**—ನೀವು ತೆಗೆದುಬಿಟ್ಟರೆ?

**ತಾರಾನಾಥ**—ನಮಗೆ ನಿಮ್ಮ ಒಂದು ಕಡ್ಡಿಯೂ ಬೇಡ. ನೀವು ಈ ರೀತಿ ಗಡಿಬಿಡಿ ಮಾಡುವುದೂ ಬೇಡ. ಮೃತ್ಯುತಲ್ಪದಲ್ಲಿ ಇಂತಹ ಗಲಾಟೆ ಮಾಡುವ ನೀವು ಮಾನವರೊ? ದಾನವರೊ?

**ಕುಟುಂಬಿಕ**—ಅದನ್ನೆಲ್ಲ ನಿಮ್ಮೊಡನೆ ಕೇಳುವುದಿಲ್ಲ. ನಮ್ಮ ಸೊತ್ತು ನಮಗೆ ಸಿಗಬೇಕು. ನಿಮಗೆ ಅವುಗಳಲ್ಲಿ ಹಕ್ಕಿಲ್ಲ ಮನೋರಮೆ, ಒಳಗಿನ ಕೋಣೆಯ ಬೀಗದಕೈ ಕೊಡು. (ಮನೋರಮೆಯು ಗಟ್ಟಿಯಾಗಿ ಮರುಗುವಳು.) ಮರ ಉರುಳಿತು, ಹಕ್ಕಿ ಹಾರಿತು. ಇನ್ನೇಕೆ ದುಃಖ? ಕೊಡು, ಬೀಗದಕೈ ಕೊಡು.

**ತಾರಾನಾಥ**—ಆ ಬೀಗದ ಕೈಯೂ ಈಗಲೇ ಬೇಕೆ? ಅನಂತರ ಕೊಟ್ಟರಾಗದೆ?

**ಕುಟುಂಬಿಕ**—ಈ ಕ್ಷಣ ಬೇಕು. ನಂತರಗಿಂತರ ಎಂದರಾಗದು. ನಿಮ್ಮ ಕಪಟವೆಲ್ಲಾ ನಡೆಯದು.

**ತಾರಾನಾಥ**—ತಂಗಿ, ಕೊಡು. ಅವರ ಬೀಗದ ಕೈಯನ್ನು ಅವರಿಗೆ ಕೊಡು. ಇನ್ನು ನಮಗೆ ಇಲ್ಲಿ ಏನೂ ಹಕ್ಕಿಲ್ಲ. (ಮನೋರಮೆಯು ದುಃಖಿಸುತ್ತಾ ಬೀಗದಕೈ ಕೊಡುವಳು.) ಶಿವ! ಶಿವ! ಇದೆಂತಹ ರಾಕ್ಷಸೀ ಮನೋವೃತ್ತಿ! ಈ ಕುಟುಂಬದವರು ಯಮದೂತರಿಗಿಂತಲೂ ಕಟುಕ ಹೃದಯಿಗಳಾದರಲ್ಲ! ಪ್ರೇಮ, ಕರುಣೆ, ಕನಿಕರದ ಬಿಂದುಮಾತ್ರವಾದರೂ ಇವರಲ್ಲಿ ಇರುವುದೇ? ಇಂತಹ ಪೈಶಾಚಿಕತನಕ್ಕೆ ಕಾರಣವಾದ ಆ ಪದ್ಧತಿಗಾದರೂ ಏನೆನ್ನಬೇಕು? ಪ್ರಾಣವು ಪೂರ್ಣ ಹೋಗುವ ಮೊದಲೇ ಹೀಗೆ ಪೀಡೆಕೊಡುವವರು ರಣಹದ್ದುಗಳಿಗಿಂತಲೂ ಕಡೆಯಲ್ಲವೆ? ಮೃತನ ಪತ್ನೀಪುತ್ರರು ತಮ್ಮಂತೆಯೇ

ಮಾನವರೆಂಬ ಕಲ್ಪನೆಯಾದರೂ ಇವರಿಗಿರುವುದೆ? ಛೆ! ಇಂತಹ ಪೈಶಾಚಿಕ ಸ್ಥಿತಿಗೆ ಕಾರಣವಾದ ಆ ಪದ್ಧತಿಗೆ ಶತ ಧಿಕ್ಕಾರವಿರಲಿ! ಈ ಅಸ್ವಾಭಾವಿಕ ದುಷ್ಪದ್ಧತಿಯಿಂದ ಪ್ರತಿಯೊಂದು ಮನೆಯಲ್ಲೆಂಬಂತೆ ಪುರುಷರು ಮೃತರಾದೊಡನೆಯೇ ನಡೆಯುತ್ತಿರುವ ಹೃದಯದ್ರಾವಕ ದೃಶ್ಯಗಳಿಂದಲಾದರೂ ಮನ ಕರಗದೆ? ಕುಟುಂಬಪ್ರೇಮದ ನಟನೆಯ ವಾದವನ್ನು ಮುಂದೊಡ್ಡುವ ಆ ಹೃದಯವಾದರೂ ಅದೆಂತಹ ಪಾಷಾಣವಾಗಿರಬೇಕು? (**ಸುತ್ತುಮುತ್ತ ಮುತ್ತುತ್ತಿರುವ ಕುಟುಂಬಿಕರ ಕಡೆಗೆ ತಿರುಗಿ**) ತೆಗೆಯಿರಿ! ಏನು ಬೇಕಾದರೂ ತೆಗೆಯಿರಿ! ಬೇಕಾದರೆ ನಮ್ಮಲ್ಲಿ ಇದ್ದುದನ್ನೂ ಕಸುಕೊಳ್ಳಿರಿ! ನಮನ್ನು ಮಾತ್ರ ಬಂದ ಹಾಗೆ ಹಿಂದೆ ಹೋಗಬಿಡಿ.

---

# ೧೫ನೇ ದೃಶ್ಯ

**[ತಾರಾನಾಥನು ಚಿಂತಾಮಗ್ನನಾಗಿ ಮನೆಯಲ್ಲೊಂದೆಡೆ ಕುಳಿತು ಆಲೋಚಿಸುತ್ತಿರುವನು.]**

**ತಾರಾನಾಥ**—ಸಂಜೀವನು ಪ್ರಾಣ ಹೋಗುವ ಕಾಲದಲ್ಲಿ, 'ಇಂದಿರೆ, ನೀನು ನಿರ್ದೋಷಿ! ತಾರಾನಾಥ, ಕ್ಷಮಿಸು ಕ್ಷಮಿಸು!' ಎನ್ನಲು ಕಾರಣವೇನು? ಇಂದಿರೆಯು ದೋಷಿಯಾಗಿರಲಿಕ್ಕಿಲ್ಲವೆಂದು ದಿನೇದಿನೇ ದೃಢವಾಗುತ್ತಿರುವ ನನ್ನ ಸಂದೇಹವು ನಿಜವಾಗಿರಬಹುದೇ? ಇದರಲ್ಲಿ ಸಂಜೀವನ ಒಳಸಂಚು ಏನೋ ಇರಬೇಕು! ಅಹ! ಅವನು ಎಲ್ಲವನ್ನೂ ವಿಶದವಾಗಿ ಹೇಳದೆ ಮೃತನಾದನಲ್ಲ! ಅಮ್ಮನೂ, ಮನೋರಮೆಯೂ ನಾನು ಎಷ್ಟು ಬಗೆಯಿಂದ ಕೇಳಿಕೊಂಡರೂ ಬಾಯಿ ಬಿಡರು. ಸಂಜೀವನ ಪ್ರಾಣೋತ್ಕ್ರಮಣ ಕಾಲದ ಅರ್ಥರಹಿತ ಉದ್ಗಾರವನ್ನು ನಾನು ಗಮನಿಸಬಾರದಂತೆ. ಆದರೆ, ಅವರೂ ಅದೇನೋ ಗುಪ್ತ ಚಿಂತಾಕುಲರಾಗಿರುವಂತಿದೆ. ಆಗಲಿ. ಆ ಸೋಮನನ್ನೇ ಕರೆಸಿ ಕೇಳುವೆನು.

**(ಮನೋಹರನು ಖೇದ, ಕೋಪಾತಿರೇಕದಿಂದ ತಾರಾನಾಥನೆಡೆಗೆ ಧಾವಿಸಿ ಬರುವನು.)**

**ಮನೋಹರ**—ತಾರಾನಾಥ, ನಿರ್ದೋಷಿ ಸ್ತ್ರೀಯೊಬ್ಬಳನ್ನು ಕೊಂದೆಯಾ? ನನ್ನ ಮೇಲೂ ನಿನಗೆ ಸಂಶಯ ಹುಟ್ಟಿತೇ? 'ಸಂಶಯಪಿಶಾಚೀ'! ನೀನೀ

ಸಂಗತಿಯನ್ನು ಬಾಯಿ ಬಿಟ್ಟಾದರೂ ಹೇಳಬಾರದಿತ್ತೇ? ಆಗ ನಾನು ನನ್ನ ಸರಳ ಹೃದಯವನ್ನಾದರೂ ಬಿಚ್ಚಿ ತೋರಿಸುತ್ತಿದ್ದೆ! ಈಗ ಇಂದಿರೆಯು ಮೃತ್ಯುಶಯ್ಯೆ ಹಿಡಿದಿರುವಳಂತೆ! ಕೊನೆಯ ಸಲ ನಿನ್ನನ್ನು ಒಮ್ಮೆ ನೋಡ ಬೇಕೆಂದು ತವಕಿಸುತ್ತಿರುವಳಂತೆ. ಹೇಗಾದರೂ ಮಾಡಿ ನಿನ್ನನ್ನು ಕರೆದು ತರಬೇಕೆಂದು ಅವಳ ತಂದೆಯೇ ಕಾಗದ ಬರೆದಿರುವರು.

**ತಾರಾನಾಥ**—ನಿನಗೆ ಹೆಚ್ಚು ಕಾಗದಗಳು ಬರಬಹುದು. ಅವಳು ನಿರ್ದೋಷಿಯೆಂಬುದಕ್ಕೆ ಆಧಾರವೇನು?

**ಮನೋಹರ**—ಆಹ! 'ಸಂಶಯಪಿಶಾಚಿ'ಯು ಎಂತಹ ಅದ್ಭುತ ಶಕ್ತಿ ಯುಳ್ಳದ್ದು! ಎಂತಹ ಆಪ್ತ ಮಿತ್ರರನ್ನಾದರೂ ಕ್ಷಣಮಾತ್ರದಲ್ಲಿ ಘೋರ ಶತ್ರುಗಳನ್ನಾಗಿ ಮಾಡುವುದು! ಎಷ್ಟೊಂದು ಪ್ರೀತಿಯ ದಾಂಪತ್ಯವನ್ನಾದರೂ ಮುರಿದುಬಿಡುವುದು! ತಾರಾನಾಥ, ನನ್ನ ಮಾತಿನಲ್ಲಿ ನಿನಗೆ ನಂಬಿಕೆ ಇಲ್ಲವೆ? ಇನ್ನೂ ನಿನ್ನನ್ನು 'ಸಂಶಯಪಿಶಾಚಿ'ಯು ಬಿಟ್ಟಿಲ್ಲವೇ?

**ತಾರಾನಾಥ**—ಅಪರಾಧಿಯ ಹೇಳಿಕೆಯಿಂದಲೇ ನ್ಯಾಯವನ್ನು ತೀ ರ್ಮಾನಿಸಲಾಗುವುದೇ?

**ಮನೋಹರ**—ಯಾರು ಅಪರಾಧಿ? ನಿರ್ದೋಷಿ ಮಿತ್ರನ ಮತ್ತು ನಿಷ್ಕಳಂಕ ಪತ್ನಿಯ ಮೇಲೆ ಅಲ್ಲಸಲ್ಲದ ಆರೋಪ ಹೊರಿಸುವ ನೀನಲ್ಲವೇ? ನಾನೇ? ತಾರಾನಾಥ, ನೀನು ಇಷ್ಟೊಂದು ಕಟುಕ ಹೃದಯನಾಗಿರುವೆಯಾ? ಆಗಲಿ. ನನ್ನ ಮೇಲೆ ಆರೋಪ ಹೊರಿಸಿದವರಾರು? (**ತಾರಾನಾಥನು ಸುಮ್ಮ ನಿರುವನು.**) ಹೇಳು, ಯಾಕೆ ಸುಮ್ಮನಿರುವೆ? ಅದನ್ನೂ ಹೇಳಲಾರೆಯಾ?

**ತಾರಾನಾಥ**—ಸೋಮನು.

**ಮನೋಹರ**—ಸೋಮನು! ಅವನೆಲ್ಲಿರುವನು? (**ಒಳಗೆ ಹೋಗಿ ಸೋಮನನ್ನು ಧರಧರನೆ ಎಳೆದು ತಂದು**) ನೀಚಾ, ನೀನು ನನ್ನ ಮತ್ತು ಇಂದಿ ರೆಯ ವಿಷಯದಲ್ಲಿ ಏನೇನು ಚಾಡಿ ಹೇಳಿರುವೆ? ಹೇಳು ಹೇಳು, ಬೇಗ ಹೇಳು. ಇಲ್ಲವಾದರೆ ನಿನ್ನನ್ನು ಈಗಲೆ ಕೊಂದುಹಾಕುವೆನು.

**ಸೋಮ**—ಸ್ವಾಮಿ, ಕ್ಷಮಿಸಿರಿ, ಕ್ಷಮಿಸಿರಿ. ಪ್ರಾಣವನ್ನು ಉಳಿಸಿ ಕೊಳ್ಳಲು ಆ ಕರುಣಾಳು ಇಂದಿರಮ್ಮನವರ ಕುರಿತು ಇಲ್ಲದ ಸುಳ್ಳು ಹೇಳ ಬೇಕಾಯಿತು.

**ತಾರಾನಾಥ**—ಏನು ಸುಳ್ಳೇ? ಹಾಯ್! ಹಾಯ್! (**ಬಿದ್ದುಬಿಡುವನು. ತುಂಗಮ್ಮ, ಮನೋರಮೆಯರು ಓಡಿಬಂದು ನೀರು ತಂದು ಹಣೆಗೆ ತಳಿಸಿ ಅವನನ್ನು ಉಪಚರಿಸುವರು.**)

**ಮನೋಹರ**—ಹೇಳು. ಸತ್ಯ ಸಂಗತಿಯನ್ನೆಲ್ಲಾ ತಿಳಿಸು. ನಿನಗೆ ಯಾವ ಭಯವೂ ಬೇಡ.

**ತಾರಾನಾಥ**—(ಎಚ್ಚತ್ತು) ಸರಿಯಿರಿ! ದೂರ ಸರಿಯಿರಿ! ಪಾಪಿಗಳೇ, ಕೊಲೆಪಾತಕಿಗಳೇ, ಸರಿಯಿರಿ! ನೀನು ಮಾತೆಯಲ್ಲ! ಸಾಕ್ಷಾತ್ ಪೂತನಿ! ನಡೆ, ನನ್ನ ಇದಿರಲ್ಲಿ ನಿಲ್ಲಬೇಡ. (**ಇಬ್ಬರೂ ಹೋಗಿಬಿಡುವರು. ಮೊಣಕಾಲೂರಿ**) ಮನೋಹರ, ಕ್ಷಮಿಸುವೆಯಾ? ಈ ಮಿತ್ರದ್ರೋಹಿಯನ್ನು,—ಆತ್ಮಘಾತಕಿಯನ್ನು,—ನಿರ್ದೋಷಿ ರಮಣಿಯ ಕೊಲೆಪಾತಕಿಯನ್ನು—ಕ್ಷಮಿಸುವೆಯಾ?

**ಮನೋಹರ**—ತಾರಾನಾಥ, ನಾನೇನು ಕ್ಷಮಿಸಲಿದೆ? ನೀನು ಮಹಾಪರಾಧ ಮಾಡಿನುದು ನಿನ್ನ ಪ್ರಿಯಪತ್ನಿ ಇಂದಿರೆಗೆ. ಸೋಮ, ಹೇಳು. ಸತ್ಯ ಸಂಗತಿಯನ್ನೆಲ್ಲಾ ತಿಳಿಸು.

**ತಾರಾನಾಥ**—ನೀಚಾ, ದ್ರೋಹಿ, ನರಪಿಶಾಚೀ, ಹೇಳು. ನಿನ್ನನ್ನು ಪ್ರೇರೇಪಿಸಿದವರು ಯಾರು? ಹೇಳು. (**ಹೊಡೆಯಲು ಮುಂದುವರಿಯುವನು. ಆಗ ಮನೋಹರನು ತಡೆಯುವನು**)

**ಸೋಮ**—'ಕೊಲ್ಲುವೆ'ವೆಂದು ಕತ್ತು ಹಿಸುಕುವಾಗ ನಾನೇನು ಮಾಡಲಿ? ಸಂಜೀವ ಶೆಟ್ಟರೂ, ಅವರ ಸಂಗಾತಿ ಚಂದುಶೆಟ್ಟಿಯೂ ನನ್ನ ಕುತ್ತಿಗೆ ಒತ್ತಿ ಹಿಡಿದು, ಕೊಲ್ಲುವೆವೆಂಬ ಬೆದರಿಕೆ ಹಾಕಿ ನನ್ನನ್ನು ಸುಳ್ಳು ಹೇಳುವಂತೆ ಮಾಡಿದರು. ನಾನೇನು ಮಾಡಲಿ?

**ತಾರಾನಾಥ**—ಒಹೊ! ಈಗ ತಿಳಿಯಿತು! ಸಂಜೀವನು ಪ್ರಾಣೋತ್ಕ್ರಮಣ ಕಾಲದಲ್ಲಿ 'ಇಂದಿರೆ, ನೀನು ನಿರ್ದೋಷಿ! ತಾರಾನಾಥ, ಕ್ಷಮಿಸು, ಕ್ಷಮಿಸು!' ಎಂದು ಉದ್ಗರಿಸಿದ ರಹಸ್ಯವು ಈಗ ಸ್ಪಷ್ಟವಾಯಿತು.

(**ಪೇದೆಯು ತಾರಾನಾಥನಿಗೊಂದು ತಂತಿ ತಂದುಕೊಡುವನು. ಅದನ್ನು ಮನೋಹರನು ಒಡೆದು ಅವಸರದಿಂದ ಓದುವನು.**)

**ಮನೋಹರ**—ಅಹ! ತಾರಾನಾಥ, ಸರ್ವನಾಶವಾಯಿತು! ನಡೆ, ಹೋಗುವ. ನಾವು ಈಗಲೇ ಹೊರಡಬೇಕು ಉಡುಪಿಗೆ

**ತಾರಾನಾಥ**—ಏನು! ಏನಾಯಿತು?

**ಮನೋಹರ**—ಇಂದಿರೆಯ ಕಾಯಿಲೆಯು ವಿಷಮವಾಗಿದೆಯಂತೆ. ನಿನ್ನನ್ನೇ ಅವಳು ಹಂಬಲಿಸುತ್ತಿರುವಳಂತೆ.

**ತಾರಾನಾಥ**—ಆಹ! ಘಾತಕಿ, ಏನು ಮಾಡಿದೆ? ಹೌದು, ಹೌದು. ಮನೋಹರ, ನಾನು ಮಾನವನಲ್ಲ! ತಾರಾನಾಥನಲ್ಲ! 'ಸಂಶಯಪಿಶಾಚಿ!' ನಿಜವಾಗಿಯೂ 'ಸಂಶಯಪಿಶಾಚಿ!' ನಡೆ, ಹೋಗುವ. ಜಗದೀಶ್ವರ, ಇಂದಿರೆಯನ್ನು ಒಮ್ಮೆ ಕಣ್ಣಿನಿಂದಲಾದರೂ ನೋಡುವ ಭಾಗ್ಯವು ಈ ಪಾಪಿಗೆ ದೊರೆಯುವಂತಾಗಲಿ.

---

## ೧೬ನೇ ದೃಶ್ಯ

[ಉಡುಪಿಯ ಶ್ರೀನಿವಾಸ ಶೆಟ್ರ ಮನೆ. ಇಂದಿರೆಯ ಪ್ರಾಣೋತ್ಕ್ರಮಣ ಕಾಲದಲ್ಲಿ ಮನೋಹರ, ತಾರಾನಾಥ, ಶ್ರೀನಿವಾಸ ಶೆಟ್ರು ಮತ್ತು ಇನ್ನು ಕೆಲವರು ಅವಳ ಬಳಿ ಕಣ್ಣೀರಿಡುತ್ತಾ ಕುಳಿತಿರುವರು.]

**ಇಂದಿರೆ**—ಪ್ರಿಯಕರ, ಈಗ ನನ್ನ ಪ್ರಾಣೋತ್ಕ್ರಮಣ ಕಾಲವಾದರೂ ಅತಿ ಸಂತೋಷದ ಕಾಲ.

**ತಾರಾನಾಥ**—ಇಂದಿರೆ, ಇಂದಿರೆ! (ಕಂಠ ಬಿಗಿದು ಸುಮ್ಮನಾಗುವನು.)

**ಇಂದಿರೆ**—ನಾಥಾ, ನೀವಿನ್ನು ಚಿಂತಿಸಿ ಫಲವಿಲ್ಲ. ನಾನು ನನ್ನ ಅಂತ್ಯಕಾಲದಲ್ಲಿ ನಿಮ್ಮನ್ನು ನೋಡುವಂತಾಗಿ, ನಾನು ನಿರ್ದೋಷಿಯೆಂಬುದನ್ನು ಈಗಲಾದರೂ ನೀವು ಕಂಡುಕೊಳ್ಳುವಂತೆ ಆದುದಕ್ಕಿಂತ ಹೆಚ್ಚಿನ ಭಾಗ್ಯವನ್ನೇನೂ ಆಶಿಸಲಾರೆನು. ನನ್ನ ಮನಸ್ಸು ಆನಂದಗೊಂಡಿರುವುದು. ಅಣ್ಣಾ, ಕಾರ್ಮುಗಿಲಿನಿಂದ ಆವರಿತ ದಿನಕರನ ಸಾದೃಶ್ಯವನ್ನು ನೀನು ಅಂದು ಹೇಳಿದುದು ನೆನಪಿದೆಯೇ?

**ಮನೋಹರ**—ಆಹ! ಇಂದಿರೆ, ನಿನ್ನಂತಹ ನಿಷ್ಕಳಂಕನಿಯೂ ಈ ರೀತಿ ಪರ್ಯವಸಾನ ಹೊಂದಬೇಕಾಯಿತೇ?

**ಇಂದಿರೆ**—ನಿಷ್ಕಳಂಕಿನಿಯಾಗಲಿ, ಕಳಂಕಿನಿಯಾಗಲಿ ಒಂದು ದಿವಸ ಪರ್ಯವಸಾನ ಹೊಂದಬೇಕಲ್ಲವೆ? ಕಳಂಕಿನಿಯು ಕಲುಷಿತೆಯಾಗಿ ಸಾಯುವಳು. ನಿಷ್ಕಳಂಕಿನಿಯು ಹರುಷಿತೆಯಾಗಿ ಮೃತ್ಯುವಶಳಾಗುವಳು.

**ತಾರಾನಾಥ**—ಇಂದಿರೆ, ಈ ಪಾಪಿಯನ್ನು–ಸಂಶಯಪಿಶಾಚಿಯನ್ನು–ಕ್ಷಮಿಸುವೆಯಾ? ದೇವರೇ, ಈ ನಿರ್ಮಲೆಯ–ಸಚ್ಚರಿತೆಯ–ಪ್ರಾಣವನ್ನೊಮ್ಮೆ ಉಳಿಸು. ಅದರ ಬದಲಿಗೆ ಈ ವಿಶ್ವಾಸಘಾತಕಿಯ–ನಿರ್ದೋಷಿರಮಣಿಯ ಮರಣಕಾರಕನ–ಪ್ರಾಣವನ್ನು ಬಲಿಯಾಗಿ ತೆಗೆದುಕೋ!

**ಇಂದಿರೆ**—ಇದೇನು ಮಾತು? ನಾನು ಅಮಂಗಲೆಯಾಗಿ, ಜೀವನ್ಮೃತೆಯಾಗಿರುವುದಕ್ಕಿಂತ ಸುಮಂಗಲೆಯಾಗಿ ಸಾಯುವುದೇ ಸೌಭಾಗ್ಯವಲ್ಲವೆ? ನಿಮ್ಮನ್ನು ನಾನು ಮೊದಲೇ ಕ್ಷಮಿಸಿರದಿದ್ದರೆ ಇಲ್ಲಿಗೆ ಕರೆಸುತ್ತಿದ್ದೆನೆ?

**ತಾರಾನಾಥ**—ಪ್ರಿಯೆ, ನೀನು ಮೃತಳಾದ ಮೇಲೆ ನಾನು ಈ ಬಾಳನ್ನು ಹೇಗೆ ಇಟ್ಟುಕೊಳ್ಳಲಿ? ನಿನ್ನನ್ನು ಕೊರಗಿಸಿ, ಕರಗಿಸಿ ಕೊಂದ ಪಾಪವಾದರೂ ನನ್ನನ್ನು ಬೇಗನೆ ಮೃತ್ಯುವಶಮಾಡಲಿ. ನಾನೂ ನಿನ್ನ ಬೆನ್ನು ಹಿಡಿದೇ ಬರುವಂತಾಗಲಿ.

**ಇಂದಿರೆ**—ಪ್ರಿಯಕರ, ನಿಮ್ಮ ಪ್ರತಿಮೂರ್ತಿಯನ್ನು ನಿಮ್ಮ ರಕ್ಷಣೆಗೊಪ್ಪಿಸುವೆನು. ಆ ವಿಷಯದಲ್ಲಿ ತಂದೆಯಾದ ನಿಮಗೆ ನಾನು ಏನೂ ಹೇಳಬೇಕಾಗಿಲ್ಲ. ಇಷ್ಟೇ ನನ್ನ ಕೊನೆಗಾಲದ ಆಶೆಯು. ಜೀವನದ ಕಾರ್ಯಕಲಾಪಗಳೆಲ್ಲಾ ನಮ್ಮ ನಿರೀಕ್ಷಣೆಯಂತೆ ನಡೆಯುವವೇ? ಎಲ್ಲವೂ ಆ ಜಗನ್ನಿಯಾಮಕನ ನಿಯಮದಂತೆ ನಡೆಯುವುದರಿಂದ ನಾವು ಆದುದೆಲ್ಲಾ ಒಳ್ಳೇದೆಂದು, ಧೃತಿಗೆಡದೆ ಮುಂದುವರಿಯುವುದರಲ್ಲಿ ಪುರುಷಾರ್ಥವಿದೆ. ನಿಮ್ಮ ಈ ಮಗುವನ್ನು ರಕ್ಷಿಸಿರಿ ನೀವು ಇನ್ನೂ ಯೌವನ ಪ್ರಾಯದವರಿರುವಿರಿ. ನನ್ನನ್ನು ಮರೆತು ಇನ್ನೊಂದು ಮದುವೆಯಾಗಿ ಸುಖವಾಗಿರಬೇಕೆಂದೇ ನನ್ನಿಚ್ಛೆ.

**ತಾರಾನಾಥ**—ಇದೇನು ಮಾತನಾಡುವೆ? ಇನ್ನು ನನಗೆ ಮದುವೆ ಎಂದರೆ ಮಸಣವು! ಅದನ್ನೇ ನಾನು ಕ್ಷಣಕ್ಷಣ ನಿರೀಕ್ಷಿಸುತ್ತಿರುವೆನು.

**ಇಂದಿರೆ**—ಅಣ್ಣಾ, ಆಯಿತು! ನನ್ನ ಜೀವನದ ಕೊನೆಯ ಕಾಲವು ಸಮಿಾಪಿಸಿತು. ನೀವು ಇಬ್ಬರೂ ನನ್ನೆದುರಿಗೆ ಬಂದು ಕುಳಿತುಕೊಳ್ಳಿರಿ. ಕೊನೆಯ ಸಲ ನಿಮ್ಮಿಬ್ಬರ ಮುಖವನ್ನು ನೋಡುವ ಆತುರವಿರುವುದು.

**(ಇಬ್ಬರೂ ಇಂದಿರೆಯ ಎದುರು ಕುಳಿತುಕೊಳ್ಳುವರು. ಇಂದಿರೆಯು ಅವರನ್ನೇ ಎವೆಯಿಕ್ಕದೆ ನೋಡುತ್ತಾ ಪ್ರಾಣಬಿಡುವಳು.)**

---

*

# ತೊದಲ್ನುಡಿ ಗ್ರಂಥಮಾಲೆ, ಉಡುಪಿ.

**ಪ್ರಾರ್ಥನೆ**—ಸಾಹಿತ್ಯಗಳ ಮೇಲಾಟದ ಕಾಲವಿದು. ಕನ್ನಡವೂ ಅವುಗಳ ಸಹಪಂಕ್ತಿಯಲ್ಲಿ ತಲೆಯೆತ್ತಿ ನಿಂತು ಸ್ಪರ್ಧಿಸಲೆಂದು ಹಿರಿಯರ ಪ್ರಯತ್ನ. ಅವರ ಪ್ರಯತ್ನದಲ್ಲಿ ತುಸು ಬೆಂಬಲದ ಸೇವೆಯನ್ನು ಮಾಡಬೇಕೆಂದು **'ಕಿರಿಯರ'** ಭಾವನೆ. ಈ ಭಾವನೆಯೇ ದೈವಪ್ರೇರಣೆಯಿಂದ **'ಕಿರಿಯರ ಪ್ರಪಂಚ'**ವಾಗಿ ತಲೆಯೆತ್ತಿರುವುದು

ಸಮಾಜದ ಏರಿಳಿಕೆಗಳು ಅದರ ಆಚಾರದಲ್ಲಡಕವಾಗಿವೆ. ಆಚಾರದ ಒಳಿತುಹೀನತೆಗಳು ವಿಚಾರದ ಕೈಯೊಳಗಿವೆ. ಇಂತಹ ಸುವಿಚಾರದ ಪಡಿಯಚ್ಚುಗಳನ್ನು ಸಾಧ್ಯವಾದ ಮಟ್ಟಿಗೆ ಸಂಗ್ರಹಿಸಿ ಸಮಾಜದ ಮುಂದಿಡುವುದೇ 'ಕಿರಿಯರ ಪ್ರಪಂಚ'ದ **'ತೊದಲ್ನುಡಿ'** ಗ್ರಂಥಮಾಲೆಯ ಹಿರಿ ಗುರಿ. ಮಾಲೆಯಲ್ಲಿ ಈ ಪಡಿಯಚ್ಚುಗಳು ಕಥೆ, ಕಾದಂಬರಿ, ಕವನ, ನಾಟಕಾದಿಗಳ ರೂಪದಲ್ಲಿ ಹೊರಬೀಳುವವು. ಈ ನಮ್ಮ ಕಾರ್ಯದಲ್ಲಿ ಭಾಷಾಭಿಮಾನಿಗಳೂ ದೇಶಾಭಿಮಾನಿಗಳೂ ಕೈಕೊಟ್ಟು ಸಹಕರಿಸಿ ನಮ್ಮಿಂದ ಸೇವೆಯನ್ನು ಮಾಡಿಸಿಕೊಳ್ಳಬೇಕಾಗಿ ಪ್ರಾರ್ಥನೆ.

ಆಶ್ರಯದಾದರಗಳು ದೊರಕಿದರೆ ವರ್ಷಕ್ಕೆ ೩-೪ ಗ್ರಂಥಗಳನ್ನು ಸಾಧ್ಯವಾದ ಮಟ್ಟಿಗೆ ಹೊರಡಿಸಬೇಕೆಂದು 'ಕಿರಿಯರ ಪ್ರಪಂಚ'ವು ನಿರ್ಧರಿಸಿರುವುದು.

**ಸಂಘವು ಈ ಕೆಳಗಿನಂತೆ ಸಹಾಯವನ್ನು ಅಪೇಕ್ಷಿಸುತ್ತದೆ.**

**ಗ್ರಂಥಮಾಲೆಗೆ ರೂ. ೨೫ಕ್ಕೆ ಮಿಕ್ಕಿ ಕೊಟ್ಟವರು ರಕ್ಷಕರು.**

**" ರೂ. ೧೦ಕ್ಕೆ ಮಿಕ್ಕಿ ಕೊಟ್ಟವರು ಆಶ್ರಯದಾತರು.**

**" ರೂ. ೫ಕ್ಕೆ ಮಿಕ್ಕಿ ಕೊಟ್ಟವರು ಪೋಷಕರು.**

ಇವರೆಲ್ಲರ ಹೆಸರುಗಳನ್ನು ದ್ರವ್ಯಸಹಾಯಕ್ಕನುಸಾರವಾದ ಸಂಖ್ಯಾಮಾನದಿಂದ ಗ್ರಂಥಮಾಲೆಯಲ್ಲಿ ಪ್ರಕಟವಾಗುವ ಗ್ರಂಥಗಳಲ್ಲಿ ಪ್ರಕಟಿಸಲಾಗುವುದು. ಅಂತೆಯೇ ಅವರಿಗೆ ಗ್ರಂಥಗಳನ್ನು ಧರ್ಮಾರ್ಥವಾಗಿ ಕೊಡಲಾಗುವುದು.

**'ಕಿರಿಯರ ಪ್ರಪಂಚ,'** ಉಡುಪಿ

**ಕೆ. ಹೊನ್ನಯ್ಯ ಶೆಟ್ಟಿ,**
**ಕಾರ್ಯದರ್ಶಿ.**

## ತೊದಲ್ನುಡಿ ಗ್ರಂಥಮಾಲೆಯ ಪುಸ್ತಕಗಳು.

---

## ೧ ಸ್ವತಂತ್ರ ಜೀವನೋಪಾಯ    ಬೆಲೆ ೦—೨—೬

(ದ್ವಿತೀಯಾವೃತ್ತಿಯು ಅಚ್ಚಿನಲ್ಲಿದೆ.)

ಜೀವನದ ಹೋರಾಟದಲ್ಲಿ ಸಿಲುಕಿದವರೂ ನಿರುದ್ಯೋಗಿಗಳೂ
ಅಗತ್ಯ ಓದತಕ್ಕ ಚಿಕ್ಕ ಪುಸ್ತಕವಿದು.

ಇದರ ಕುರಿತು '**ಕಂಠೀರವ**' ಪತ್ರಿಕೆಯ ಅಭಿಪ್ರಾಯವು ಹೀಗಿದೆ—

'ಉಡುಪಿಯ ಕೆಲವು ಉತ್ಸಾಹೀ ತರುಣರು ಕೂಡಿ 'ತೊದಲ್ನುಡಿ ಗ್ರಂಥಮಾಲೆ' ಯೆಂಬುದನ್ನು ಹೊರಡಿಸಿರುವರು. ಅದರ 'ಮೊದಲನುಡಿ'ಯಿದು. ನಾಟಿಕೆಯ ರೂಪದಲ್ಲಿ ಬರೆಯಲಾಗಿದೆ.........ಸಂವಾದದಲ್ಲೆಲ್ಲ ಪ್ರತಿಯೊಂದು ದೃಶ್ಯದಲ್ಲಿ, ಗಾದೆಗಳೂ ನಾನಾ ಉಪಮೆಗಳೂ ಅವಿರಳವಾಗಿ ಪೋಣಿಸಲ್ಪಟ್ಟಿವೆ. ಶೈಲಿಯು ಚಲೋದಿದೆ. ಇವರ ನುಡಿಗಳು ಹೆಚ್ಚಿ, 'ಕಿರಿಯರ ಪ್ರಪಂಚ'ವು ಹಿರಿದೆನಿಸ ಲೆಂದು ಹಾರೈಕೆ.'

'**ನವಯುಗ**' ಪತ್ರಿಕೆಯು ಹೀಗೆ ಅಭಿಪ್ರಾಯ ಪಡುತ್ತದೆ—

'ಈಗಣ ನಿರುದ್ಯೋಗ, ದುಂದುಗಾರಿಕೆ, ಸಾಲಗಾರಿಕೆ ಮೊದಲಾದ ಪರೋಪ ಜೀವನಗಳಿಗೆ ಜನರು ಬಲಿಬೀಳದೆ ಬೇರೆ ಬೇರೆ ವೃತ್ತಿಗಳಲ್ಲಿ ನಿರತರಾಗಿ, ಸ್ವಾಭಿಮಾನ ದಿಂದ ಸ್ವತಂತ್ರ ಜೀವನ ನಡಿಸುವಂತೆ ಚತುರ ಶಿಕ್ಷಿತ ತರುಣರು ಹಳ್ಳಿಗಳ ಸಂಘಟನಾ ಕಾರ್ಯವನ್ನು ಕೈಕೊಂಡು ಯಾವ ರೀತಿಯಲ್ಲಿ ಕೆಲಸ ಮಾಡಬೇಕೆಂಬ ಆದರ್ಶವನ್ನು ಈ ಚಿಕ್ಕ ಹೊತ್ತಿಗೆಯಲ್ಲಿ ನಿರ್ದೇಶಿಸಲಾಗಿದೆ................ಕರ್ನಾಟಕದ ಹಿರಿಯರ ಸಾಹಿತ್ಯಸೇವೆಗೆ ಬೆಂಬಲವೀಯಬೇಕೆಂಬ ಈ 'ಕಿರಿಯರ ಪ್ರಪಂಚ'ದ ಹಿರಿ ದಿಚ್ಛೆಯು ತಕ್ಕ ಆಶ್ರಯ ಪ್ರೋತ್ಸಾಹ ದೊರೆತು ಸಾರ್ಥಕವಾಗಿ, ಕಿರಿಯರು ಹಿರಿಯರಾಗಿಯೇ ಮೆರೆವಂತಾಗಲೆಂದು ಹಾರೈಕೆ.'

'**ಜಯಕರ್ನಾಟಕ**'ವು ಹೀಗನ್ನುತ್ತದೆ—

'...........ಈ ಪ್ರಹಸನದಲ್ಲಿ ಭಾವನಾಸಾಮ್ರಾಜ್ಯದಲ್ಲಿಯ ಒಂದು ಆದರ್ಶಜೀವನದ ಆಕಸ್ಮಿಕ ಸಂಗತಿಗಳನ್ನು ಚಿತ್ರಿಸಿದ್ದಾರೆ. ಅಂತೂ ಕನ್ನಡಿಗರು ಇದನ್ನು ಓದಿನೋಡಲೆಂದು ಆಶಿಸುತ್ತೇವೆ.'

---

## ೨ **ಸಂಶಯ ಪಿಶಾಚಿ** (ದ್ವಿತೀಯ ಮುದ್ರಣ) ಬೆಲೆ ೦—೬—೦

ಅಳಿಯಸಂತಾನಕಟ್ಟಿನ, ಮುಖ್ಯವಾಗಿ ಬಂಟಸಮಾಜದ ಸದ್ಯದ ನಡ ವಳಿಕೆಯನ್ನೂ ಅದರಿಂದುಂಟಾಗುವ ದುಷ್ಪರಿಣಾಮಗಳನ್ನೂ ಚಿತ್ತವೇಧಕ ವಾಗಿ ಚಿತ್ರಿಸಿ ಸಮಾಜದೇಳಿಗೆಯ ಮಾರ್ಗವನ್ನು ಸೂಚಿಸುವ ನಾಟಕವಿದು.

---

## ೩ **ನಾಡ ಕಥೆಗಳು** ಬೆಲೆ ೦—೨—೦

ದಕ್ಷಿಣ ಕನ್ನಡ ಜಿಲ್ಲೆಯ ವಿವಿಧ ಆಚಾರಾಂಧತೆಗಳ ಪಡಿಯಚ್ಚು ಗಳನ್ನು ಸ್ತೋಪಲಿಚ್ಛಿಸುವವರಿಗೆ ಒಂಪೆಡೆ ಕೂಡಿಸಿಟ್ಟ ಚಿಕ್ಕ ಕಥೆ ಪುಸ್ತಕ.

ಈ ಪುಸ್ತಕದ ಕುರಿತು **'ಜಯಕರ್ನಾಟಕ'ದ** ಅಭಿಪ್ರಾಯವಿದು—

'ಈ ಪುಸ್ತಕದಲ್ಲಿ ಬೇರೆ ಬೇರೆ ಐದು ಜನರು ಬರೆದ, ಸಮಾಜದ ಸ್ವಾಭಾವಿಕ ಚಿತ್ರಗಳನ್ನೊಳಗೊಂಡ ಐದು ಕಥಗಳಿವೆ. ಮೊದಲನೆಯ ಕಥೆಯಾದ 'ತಿರುಪತಿ ಮುಡುಪಿನ ಕಳವು' ಎಂಬುವುದರಲ್ಲಿ ಬರುವ ಸೆಟ್ಟರು ಭಟ್ಟರು ಎಲ್ಲೆಲ್ಲಿಯೂ ನೋಡಲು ಸಿಕ್ಕುವರು. 'ನಮ್ಮ ಶಾಸ್ತ್ರಗಳು' ಎಂಬ ಎರಡನೆಯ ಕಥೆಯಲ್ಲಿದ್ದ ವಸ್ತುಗಳನ್ನೊಳ ಗೊಂಡ ಕತೆಗಳು ಈಗಾಗಲೇ ಪಲವು ಪ್ರಸಿದ್ಧವಾಗಿವೆ. 'ಶೆಟ್ರ ಮನೆಯ ಮದುವೆ' ಎಂಬ ಕತೆಯಲ್ಲಿ ಎಡೆಯಾದುತ್ತಿದ್ದ ಚುಚ್ಚು ನಗೆಯು ವಾಚಕರಿಗೆ ನಗೆಯೊಡನೆ ಮೈ ಜುಮ್ಮನ್ನೂ ಹುಟ್ಟಿಸುವುದು. 'ನಮ್ಮೂರ ಐಗಳು' ಬಹು ಜನರಿಗೆ ಅಪರಿಚಿತರಾದವ ರಲ್ಲ. ಕೊನೆಯ ಕಥೆಯಾದ 'ಅಂದು ಇಂದು' ಎಂಬುದು ಸೊಗಸಾದ ಸಣ್ಣ ಕಥೆ. ಹೇಳುವ ಮಾತಿನ ರೀತಿಯೂ ಚೆನ್ನಾಗಿದೆ ...ಇಲ್ಲಿಯ ಈ ತರುಣ ಕಥಾಲೇಖಕರ ಭವಿಷತ್ ಕಾರ್ಯದ ಕಡೆಗೆ ಹೆಚ್ಚು ಆಶೆಯ ನೋಟದಿಂದ ನಾವು ನೋಡುತ್ತಿದ್ದೇವೆ.'

**'ಕಂಠೀರವ'**ವು ಹೀಗೆ ಹೇಳುತ್ತದೆ—

........ಸಣ್ಣ ಕಥೆಗಳ ಸಂಗ್ರಹ.**'ನಮ್ಮ ಶಾಸ್ತ್ರಗಳು'** ಎಂಬ ಕತೆಯು ಹೃದಯಂಗಮವಾಗಿದೆ. **'ಅಂದು ಇಂದು'** ಎಂಬ ದೃಶ್ಯವೂ ಮನೋ ಹರವಾಗಿದೆ........ಇವರ ಪ್ರಯತ್ನಗಳಿಗೆ ಶ್ರೇಯಸ್ಸನ್ನು ಕೋರುವೆವು.

---

## ೪ **ಕುಶ - ಲವ** ಬೆಲೆ ೦—೪—೦

ಹಳೆಯ ಕಥೆಯನ್ನು ಹೊಸ ಮಾದರಿಯಲ್ಲಿ ಎರಕಹೊಯ್ದ ಪೌರಾಣಿಕ ನಾಟಕವಿದು. ಈಗಿನ ಶಿಕ್ಷಣದಲ್ಲಿರುವ ದೋಷಗಳನ್ನು ಎತ್ತಿ ತೋರಿಸಿ, ಸುಧಾರಣೆಯ ಹಾದಿಯನ್ನು ಸೂಚಿಸುವ ಗ್ರಂಥ.

## ೫ ಕಾವ್ಯಸಾಮ್ರಾಜ್ಯ

ಬೆಲೆ ೦—೧೨—೦

ಸವಿಗವನಗಳ ಸುಗ್ಗಿ!

ಕನ್ನಡಿಗರಿಗೊಂದು ಸುಸಂಧಿ!

**ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರು ತಮ್ಮ ಮುನ್ನುಡಿಯಲ್ಲಿ**

'...ಎಲ್ಲಕ್ಕೂ ಹಿತವಾಗಿ ಅಚ್ಚಗನ್ನಡದ ತಿಳಿನುಡಿ, ಅಚ್ಚಗನ್ನಡದ ಸವಿ ಹಾಡು, ಅಚ್ಚಗನ್ನಡಿಗರ ಬಾಳುಬದುಕು. ಕನ್ನಡದ ಹೊಮ್ಮಳೆ.

ಈ ಕಾವ್ಯಸಾಮ್ರಾಜ್ಯವನ್ನು ಹೆಚ್ಚಾಗಿ 'ಕಿರಿಯ' ಕವಿಗಳ ಕವನಗಳಿಂದಲೇ ಕೂಡಿಸಿರುವ ಕಿರಿಯರ ಪ್ರಪಂಚಕ್ಕೆ ಕನ್ನಡಿಗರು ಋಣಿಗಳು. ಹಿರಿಯರೆಲ್ಲರೂ ಇದನ್ನು ಆನಂದದಿಂದ ಓದುವರು.' ಎಂದಿರುವರು.

**'ಸಂಯುಕ್ತ ಕರ್ನಾಟಕ'**ವು ಅನ್ನುವುದೇನೆಂದರೆ—

**'....ಆಧುನಿಕ ಕವಿಗಳ ಕವಿತೆಗಳ ಇಂತಹ ಉತ್ತಮ ಸಂಗ್ರಹವನ್ನು ಈ ವರೆಗೆ ಯಾರೂ ಒದಗಿಸಿ ಕೊಟ್ಟಿರುವುದಿಲ್ಲ.** ಇದಕ್ಕಾಗಿ ಕನ್ನಡಿಗರು 'ಕಿರಿಯರ ಪ್ರಪಂಚ'ಕ್ಕೆ ಆಭಾರ ಮನ್ನಿಸಬೇಕು. ಆದರೆ ಶಬ್ದದಿಂದಲ್ಲ; 'ಕಾವ್ಯಸಾಮ್ರಾಜ್ಯ'ವನ್ನು ಕೊಂಡುಕೊಂಡು ಧನರೂಪದಿಂದ.'

**'ಜಯಕರ್ನಾಟಕ'**ವು ಹೀಗೆನ್ನುತ್ತದೆ—

'ಆಧುನಿಕ ಕವಿಗಳ ಕವನಗಳ ಸಂಗ್ರಹವಿದು. ಉತ್ಸಾಹಿಗಳಾದ 'ಕಿರಿಯರು' ಮಾಡಿದ ಸಾಹಸವನ್ನು ನೋಡಿ ಕೌತುಕವೆನಿಸಿತು.'

ಶ್ರೀ. ತಿ. ನ. ಶ್ರೀಕಂಠಯ್ಯನವರು ಬೆಂಗಳೂರಿಂದ ಹೀಗೆ ಬರೆಯುತ್ತಾರೆ—

'.........ಗ್ರಂಥವೂ ಒಳಗಿನ ವಿಷಯವೂ ಎರಡೂ ಅಂದವಾಗಿವೆ ತಮ್ಮ ಸಾಹಿತ್ಯಸೇವೆ ಯಶಸ್ವಿಯಾಗಿ ಮುಂಧುವರಿಯಲೆಂದು ಹಾರೈಸುತ್ತೇನೆ'

ಪ್ರೊಫೆಸರ್ ವಿ. ಕೆ. ಗೋಕಾಕರು ಪುಣೆಯಿಂದ ಹೀಗೆ ತಿಳಿಸುತ್ತಾರೆ—

'ಒಳಗೂ ಹೊರಗೂ 'ಸಾಮ್ರಾಜ್ಯ'ವು ಅಂದವಾಗಿದೆ. ಎಲ್ಲ ಭಾಗಗಳ ಕವಿಗಳ ಕೃತಿಗಳು ಪ್ರಾತಿನಿಧಿಕವಾಗಿ ಅದರಲ್ಲಿ ಬಂದು ನಿಂತಿವೆ......ಅತ್ಯಂತ ಸ್ತುತ್ಯವಾಗಿದೆ.'

ಡಾ. ಟಿ. ಮಾಧವ ಪೈ, M B & B.S ಉಡುಪಿ ಇವರು ಹೀಗೆ ಬರೆಯುತ್ತಾರೆ—

'............'ಕಾವ್ಯಸಾಮ್ರಾಜ್ಯ'ವು ಕನ್ನಡ ಆಧುನಿಕ ಸಾಹಿತ್ಯಕ್ಕೆ ರತ್ನಪ್ರಾಯವಾಗಿರುವುದು ............'

## OPINION OF THE "HINDU" (MADRAS)

When the country is the throes of a new awakening, every attempt to advance the nation's cause should be welcomed. The national edifice, to be lasting, has to be built on the sure foundation of culture. When so many modern thoughts, some of an alien origin, are seemingly in conflict with established traditions of the country the need for directing young mind, in the proper direction becomes all the more pressing. The book under review is a collection of over thirty poems written by various authors of the Kannada speaking portion of the country. The topics are varied. Some of the compositions offer light reading, while others are thought-provoking; but through all there runs the spirit of awakened India, with a nationalistic outlook on life, and great love for the country; its language and culture. 'Kiriyara Prapancha' has chosen the poems carefully and though the poets are modern and young, the work is such as to appeal to young and old alike.

## ಮದ್ರಾಸಿನ 'ಹಿಂದೂ' ಪತ್ರಿಕೆಯ ಅಭಿಪ್ರಾಯ

ರಾಷ್ಟ್ರವು ನವಜಾಗ್ರತಿಯಲ್ಲಿ ಪದಾರ್ಪಣ ಮಾಡಿರುವಾಗ ರಾಷ್ಟ್ರಹಿತವನ್ನು ಮುಂದೊತ್ತುವ ಪ್ರತಿಯೊಂದು ಯತ್ನವು ಸ್ವಾಗತೀಕರಿಸತಕ್ಕದ್ದಾಗಿದೆ. ರಾಷ್ಟ್ರೀಯತೆಯು ಅಚ್ಚಳಿಯದೆ ಉಳಿಯಬೇಕಾದರೆ ಅದಕ್ಕೆ ಸಂಸ್ಕೃತಿಯ ಭದ್ರವಾದ ತಳಹದಿಯು ಪ್ರಾಮುಖ್ಯವಾಗಿದೆ. ಆಧುನಿಕ ಭಾವನೆಗಳು ಅವುಗಳಲ್ಲಿ ಕೆಲವು ವಿದೇಶೀ ವಿಚಾರಪರಿಪ್ಲುತವಾಗಿದ್ದು ತೋರಿಕೆಗೆ ಸ್ಥಾಪಿತ

ವಿಚಾರಗಳಿಗೆ ವಿರುದ್ಧವೆಂದು ಕಂಡುಬಂದರೂ ಕಿರಿಯರ ಮನಸ್ಸು ನ್ಯಾಯವಾದ ದಾರಿಯನ್ನು ಹಿಡಿಯುವಂತೆ ಮಾಡುವ ಅಗತ್ಯವು ಮತ್ತಷ್ಟು ಹೆಚ್ಚಾಗುತ್ತದೆ. ಪ್ರಕೃತ ಪುಸ್ತಕವು ಕನ್ನಡ ಭಾಷೆಯನ್ನು ಮಾತನಾಡುವ ಪ್ರಾಂತ್ಯದ ಬೇರೆಬೇರೆ ಕವಿಗಳ ೩೦ಕ್ಕೆ ಮೀರಿದಷ್ಟು ಕವಿತೆಗಳ ಸಂಗ್ರಹವೆಂದು ಕಂಡುಬರುತ್ತದೆ. ವಿಷಯಗಳು ಪ್ರತಿಪ್ರತ್ಯೇಕವಾಗಿರುತ್ತವೆ. ಕೆಲವು ಕವಿತೆಗಳು ಸರಳವಾಗಿದ್ದರೂ ಹಲವು ವಿಚಾರ ಜಾಗೃತಿಯನ್ನುಂಟುಮಾಡುವುವುಗಳಾಗಿರುತ್ತವೆ. ಆದರೆ ಈ ಕವಿತೆಗಳಲ್ಲಿ ಆದಿಯಿಂದ ಅಂತ್ಯದ ವರೇಗೂ ನವ ಜಾಗೃತ ಭಾರತೀಯರ ಸಂಸ್ಕೃತಿ, ಸ್ವಭಾಷಾಭಿಮಾನ, ಸ್ವದೇಶಾಭಿಮಾನ ಇವುಗಳ ಸ್ಫೂರ್ತಿಯು ಒಡೆದು ಕಾಣುತ್ತದೆ. 'ಕಿರಿಯರ ಪ್ರಪಂಚ'ವು ಕವಿತೆಗಳ ಆಯುವಿಕೆಯಲ್ಲಿ ವಿಶೇಷವಾದ ಜಾಗ್ರತೆಯನ್ನು ತೋರಿಸಿದೆ. ಕಾವ್ಯಸಾಮ್ರಾಜ್ಯವು ಆಧುನಿಕ ಕಿರಿಯ ಕವಿಗಳಿಂದ ಬರೆಯಲ್ಪಟ್ಟಿದ್ದರೂ ಕಿರಿಯರನ್ನೂ ಹಿರಿಯರನ್ನೂ ಒಂದೇ ವಿಧದಿಂದ ಮನಸೆಳೆಯುವಷ್ಟು ಶಕ್ತಿಯುಳ್ಳದ್ದಾಗಿದೆ.

**'ಬಡವರ ಬಂಧು'**ವು '........ಕವಿತೆಗಳ ಸವಿಯನ್ನುಣ್ಣಬೇಕಾದರೆ ಕಾವ್ಯಸಾಮ್ರಾಜ್ಯವನ್ನೇ ನೋಡಬೇಕು; ತರಿಸಿ ಓದಬೇಕು. ಈ ಸರ್ವ ಶ್ಲಾಘನೀಯ ಯತ್ನವನ್ನು ಪ್ರೋತ್ಸಾಹಿಸದಿದ್ದರೆ ಮತ್ತಾವುದನ್ನು?' ಎಂದಿದೆ.

**'ಕಾನಡಾ ವೃತ್ತ'**ದಲ್ಲಿ ಶ್ರೀ. ಹನುಮಂತರಾವ ಮಾಂಜರೇಕರ, ಬಿ. ಎ. ಅವರು ಬರೆಯುವುದೇನೆಂದರೆ—

'... .....ಈ ಮೊದಲು ಕೆಲವು ಕವನಸಂಗ್ರಹಗಳು ಪ್ರಸಿದ್ಧವಾಗಿದ್ದರೂ 'ಕಾವ್ಯಸಾಮ್ರಾಜ್ಯ'ವು ಒಂದು ರೀತಿಯಲ್ಲಿ ಅಪೂರ್ವವಾಗಿದೆ.... ಅದರ ಬಾಹ್ಯಾಂಗವು ನಯನ ಮನೋಹರವಾಗಿರುವಂತೆಯೇ ಅಂತರಂಗವೂ ಚೇತೋಪಹಾರಿಯಾಗಿದೆ.'

---

## ಗ್ರಂಥಮಾಲೆಯ ರಕ್ಷಕರು

೧ ಶ್ರೀಯುತ ಪಿ. ಲಕ್ಷ್ಮೀನಾರಾಯಣ ನಾಯಕರು,
ಶ್ರೀಮದ್ಭುವನೇಂದ್ರ ಮಹೌಷಧಾಲಯ, ಕಟಪಾಡಿ.

೨ ಶ್ರೀಯುತ ಕೆ. ಸುಬ್ರಾಯ ಚರ್ಡಪ್ಪ ಶ್ಯಾನುಭಾಗರು,
ಸೆಕ್ರಿಟೆರಿ, ಕೋಪರೇಟಿವ್ ಸೊಸೈಟಿ, ಕಟಪಾಡಿ.

೩. ಮೆಸ್ಸರ್ಸ್ ಮಲ್ಪೆ ವಾಮನ ಭಟ್ & ಬ್ರದರ್,
ಬೊಂಬೈ ಲೈಫ್ ಇನ್ಶೂರೆನ್ಸ್ ಏಜಂಟ್ಸ್, ಉಡುಪಿ.

## ಆಶ್ರಯದಾತರು

೧ ಶ್ರೀಯುತ ಅಂಬಾಡಿಬೀಡು ಗೋಪಾಲ ಶೆಟ್ಟರು, ಕಟಪಾಡಿ.
೨ " ತೋನ್ಸೆ ಜನಾರ್ದನಯ್ಯನವರು, ಉಡುಪಿ.
೩ " ಪಿ. ರಾಮದಾಸ ನಾಯಕರು, B.A., L.T. ಕಟಪಾಡಿ.
೪ " ಯು. ವೆಂಕಟ್ರಾಯ ಕಾಮತರು, ಉಡುಪಿ.
೫ ಮಿ. ಯಫ್. ಯಕ್ಸ್. ದಾಲ್ಮೇದರು, ಮುಖ್ಯೋಪಾಧ್ಯಾಯ,
ಸೈಂಟ್ ಫ್ರಾನ್ಸಿಸ್ ಕ್ಸೇವಿಯರ್ಸ್ ಹಾ. ಎ. ಶಾಲೆ, ಉದ್ಯಾವರ.
೬ ಶ್ರೀಯುತ 'ಕಾಮತ್', ಕಟಪಾಡಿ.
೭ " ಪಾಂಗಾಳ ಜನಾರ್ದನ ನಾಯಕರು, ಕಟಪಾಡಿ.
೮ " ಕೆದಿಂಜೆ ವೆಂಕ್ಟಯ್ಯ ಹೆಗ್ಡೆರು, ಜಮಿನ್ದಾರ್, ಯೇಣಗುಡ್ಡೆ.
೯ " ಬಿ. ಕೃಷ್ಣಯ್ಯ ಹೆಗ್ಡೇರು, ಜಮಿನ್ದಾರ್, ಹಿರಿಯಡ್ಕ.
೧೦ " ಕೆ. ಸೀತಾರಾಮ ದೊರೆಬಲ್ಲಾಳರು, ಕಟಪಾಡಿ ಬೀಡು.
೧೧ " ಎ. ಬಿ. ಶೆಟ್ಟರು, ಎಂ.ಎಲ್.ಸಿ. ಅತ್ತಾವರ, ಮಂಗಳೂರು.
೧೨ " ಕೆ. ವಾಸುದೇವ ಚರ್ಡಪ್ಪ ಶ್ಯಾನುಭಾಗರು, ಕಟಪಾಡಿ.
೧೩ ಮೆಸ್ಸರ್ಸ್ ಪಿ. ಎ. ಪೈ ಬ್ರದರ್ಸ್‌ರವರು, ಉಡುಪಿ.
೧೪ ಶ್ರೀಯುತ ಯು. ಸದಿಯನವರು, ಜಮಿನ್ದಾರ್, ಉದ್ಯಾವರ
೧೫ " ಬಿ. ವಾಸುದೇವ ರಾಯರು, ಎಡ್ವೊಕೇಟ್, ಉಡುಪಿ.
೧೬ " ಶಿರ್ವ ನಂದ್ಯಪ್ಪ ಶೆಟ್ಟರು, ಪೋಸ್ಟ್ ಮಾಸ್ಟರ್, ಶಿರ್ವ.
೧೭ " ಎಚ್. ವೀರಯ್ಯ ನಾಯ್ಕರು, ಅಧ್ಯಾಪಕ, ಕಾಪು.
೧೮ " ಪಿ ಆನಂದ ನಾಯ್ಕರು, ಮರ್ಚಂಟ್, ಕಟಪಾಡಿ.
೧೯ " ಬಿ ರಾಮಣ್ಣಶೆಟ್ರು, ಹೇ|ಮಾ. ಹಾ.ಎ ಶಾಲೆ, ಬಾರ್ಕೂರು.
೨೦ " ಕೆ. ಮುದ್ದಣ್ಣ ಶೆಟ್ಟರು, ಹೆಡ್‌ಮಾಸ್ಟರ್, ಕೊರಂಗ್ರಪಾಡಿ.

---

## ಪೋಷಕರು

೧ ಶ್ರೀಯುತ ಕೆ. ರಾಮ ಕಾಮತರು, ಮರ್ಚಂಟ್, ಕಟಪಾಡಿ.
೨ " ನಂದಪ್ಪ ಹೆಗ್ಡೇರು, ಯೇಣಗುಡ್ಡೆ.
೩ " ಕೆ. ಕೃಷ್ಣಯ್ಯ ಶೆಟ್ಟರು, ಪಡುಮನೆ, ಕೆಮ್ಮುಣ್ಣುರು.
೪ " ಕೆ. ನಾರಾಯಣ ಶೆಟ್ಟರು, ಜಮಿನ್ದಾರ್, ಕೊರಂಗ್ರಪಾಡಿ.

೫ ಶ್ರೀಯುತ ಯು. ಪರಮೇಶ್ವರ ಮೇಸ್ತ್ರರು, ಫಿಜಿಶಿಯನ್, ಉದ್ಯಾವರ.
೬ " ಪುತ್ತಿಗೆ ಸುಬ್ಬಣ್ಣಾಚಾರ್ಯರು, ಉದಿಯಾವರ ಕುದುರು
೭ " ಬೆಳ್ಕಳೆ ಕೆರೆಮನೆ ವೆಂಕಪ್ಪ ಶೆಟ್ಟರು, ಉಡುಪಿ.
೮ " ಕುತ್ಪಾಡಿ ತಿಮ್ಮಪ್ಪ ಶೆಟ್ಟರು, ಉಡುಪಿ.
೯ " ಬೆಳ್ಕಳೆ ಕೆರೆಮನೆ ನಾರಾಯಣ ಶೆಟ್ಟರು, ಉಡುಪಿ.
೧೦ " ಕೊರಂಗ್ರಪಾಡಿ ತೇಜಪ್ಪ ಶೆಟ್ಟರು, ಉಡುಪಿ.
೧೧ " ಕವಿರಾಜ ಮಹಾಬಲ ಶೆಟ್ಟರು, ಮಂಗಳೂರು
೧೨ " ಯು. ವಿ. ಆರಾಧ್ಯರು, ಜಮೀನ್ದಾರ್, ಉದ್ಯಾವರ.
೧೩ " ಕೊರಂಗ್ರಪಾಡಿ ದೇವಯ್ಯ ಹೆಗ್ಡೇರು, ಬೊಂಬಾಯಿ.
೧೪ ಶ್ರೀಮತಿ ಮಂದಾಕಿನಿ ಬಾಯಿಯವರು, ರಾಷ್ಟ್ರಭಾಷಾವಿಶಾರದಾ, ವಿದುಷಿ,
ಕೆನರೀಸ್ ಪಂಡಿತ್, ಕ್ವೀನ್ಸ್‌ಮೆರಿಸ್ ಕೊಲೇಜ್, ಮದ್ರಾಸ್.
೧೫ ಶ್ರೀಯುತ ಎಂ. ಪದ್ಮನಾಭ ರಾಯರು, ಜಮೀನ್ದಾರ್, ಮುಟ್ಟಿ.
೧೬ " ಯು. ರಾಮಚಂದ್ರ ಮಯ್ಯರು, ಅಧ್ಯಾಪಕ, ಉದ್ಯಾವರ.
೧೭ " ಎಂ. ಬೊಮ್ಮಯ್ಯ ಶೆಟ್ಟರು, B. M. ಸ್ಕೂಲ್, ಉಚ್ಚಿಲ.
೧೮ " ಮಹಾಬಲ ಶೆಟ್ಟರು, ಟೀಚರ್‌ಮೆನೇಜರ್, ಎಡ್ಮೇರು.
೧೯ " ಎಂ. ವಿಟ್ಠಲ ಶೆಟ್ಟರು, ಅಧ್ಯಾಪಕ, ಮಲ್ಲಾರು.
೨೦ " ಕೆ. ವಿ. ಕೃಷ್ಣಯ್ಯನವರು, ಹೆಡ್‌ಮಾಸ್ಟರ್, ಮಲ್ಲಾರು.
೨೧ " ಕೆ. ಶೇಸು ಶೆಟ್ಟರು, ಅಧ್ಯಾಪಕ ಕಾಪು
೨೨ " ಎಂ ಅನಂತ ಕೃಷ್ಣರಾಯರು, ಹೆಡ್‌ಮಾಸ್ಟರ್, ಮುಟ್ಟಿ
೨೩ " ಪಿ. ಮುದ್ದಣ್ಣ ಶೆಟ್ಟರು, B.M. ಸ್ಕೂಲ್, ಪಾದೂರು.
೨೪ " ಯು. ದಾದು, ಹೆಡ್‌ಮಾಸ್ಟರ್, ಕೈಪುಂಜಾಲ್.
೨೫ " ಕೆ. ಮುದ್ದಣ್ಣ ಶೆಟ್ಟರು, ಕೆನರಾ ನರ್ಸರಿ, ಕಾಪು.
೨೬ " ಕೆ. ಪದ್ಮನಾಭ ಶ್ಯಾನುಭಾಗರು, ಹೆ|ಮಾ. ಕರಂದಾಡಿ
೨೭ " ಕೆ. ಅಂತಯ್ಯ ಹೆಗ್ಡೇರು ಜಮೀನ್ದಾರ್, ಕೊರಾಡಿ.
೨೮ " ಮಟ್ಪಾಡಿ ಶೀನಪ್ಪ ಶೆಟ್ಟರು, ಟೀಚರ್, ಬಾರ್ಕೂರು.
೨೯ " ಬೈಕಾಡಿ ರಾಮಣ್ಣ ಶೆಟ್ಟರು, ಅಧ್ಯಾಪಕ, ಬಾರ್ಕೂರು.
೩೦ " ಪಿ ಶೀನಪ್ಪ ಶೆಟ್ಟರು, ಟೀಚರ್, ಪೆರಂಪಳ್ಳಿ.

---